ಬೆಲೆ: ಎರಡು ಆಣೆ

# ಕರ್ಮವೀರ

ಸಂಪಾದಕರು :
ಹ. ರಾ. ಪುರೋಹಿತ ಎಂ. ಎ.

)——ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ——(

Editor :
H. R. Purohit, M. A.

--( ಸಂಪುಟ ೧೯ )--

ಹುಬ್ಬಳ್ಳಿ ಸೋಮವಾರ ತಾರೀಖು ೧೫--೯--೧೯೪೭

--( ಸಂಚಿಕೆ ೨೪ )--



# ಸಾಮ್ರಾಜ್ಯ ಸಾರ್ವಭೌಮತ್ವಗಳ ಸಂಧ್ಯಾಸಮಯ

## ಡಚ್ಚರ ಅಜ್ಞಾನಾಂಧಕಾರ-ಏಶಿಯದ ಸ್ವತಂತ್ರ ರಾಷ್ಟ್ರಗಳ ಕರ್ತವ್ಯ— ಅಮೇರಿಕ ರಶಿಯಗಳ ಪ್ರಸಾದನ ವ್ರತ— ಪ್ರಾಚೀನಯುಗದ ಪರ್ಯವಸಾನ---

ಇಂದು ೧೯೪೭ನೆಯ ಇಸವಿ, ನವಮನ್ವಂತರಾರಂಭ, ಆಗಸ್ಟ್ ೧೫ ಕಳೆದು ಹೋಯಿತು, ಹಿಂದುಸ್ತಾನದಲ್ಲಿ ಬ್ರಿಟಿಶರ ಆಳಿಕೆ ಮುಗಿಯಿತು-- ಎಂಬುದು ಡಚ್ಚರಿಗೆ ತಿಳಿಯಬಾರದೇ ? ಪೆಸಿಫಿಕ್ ಸಾಗರದಲ್ಲಿಯ ಡಚ್ಚಸಾಮ್ರಾಜ್ಯದ ಸಂರಕ್ಷಣೆಯು ಬ್ರಿಟಿಶರ ಕೈಯಲ್ಲಿತ್ತು; ಈಗ ಬ್ರಿಟಿಶರ ಸಾಮ್ರಾಜ್ಯವೇ ಅವರ ಕೈಬಿಟ್ಟು ಹೋಗಿದೆ— ಎಂದ ಮೇಲೆ ಡಚ್ಚರಿಗೋಸುಗ ಅವರು ಮಾಡುವದೇನುಳಿಯಿತು ? ೧೯೪೦ರಲ್ಲಿ ಜಪಾನಿಗೆದುರಾಗಿ ಯುದ್ಧಸಾರಿ ಫಲವತ್ತಾದ ಜಾವಾ, ಸುಮಾತ್ರಾ ಮೊದಲಾದ ನಡುಗಡ್ಡೆಗಳನ್ನು ಅವರ ಪಾಲುಮಾಡಿ ಕಾಲಿಗೆ ಬುದ್ಧಿ ಹೇಳಿದ ಡಚ್ಚರು ಈಗ ೧೯೪೭ರಲ್ಲಿ ಅವರು ೧೯೩೯ರಲ್ಲಿ ಮಾಡಬಹುದಾಗಿದ್ದ ಸಾಮ್ರಾಜ್ಯ ವಿಸ್ತರಣದ ಆಲೋಚನೆಯನ್ನು ಮಾಡುತ್ತಿರುವುದು ಶುದ್ಧ ಹುಚ್ಚುತನವೆಂದು ಕ್ರಾಂತಿಕಾರಿ ಲೇಖಕರಾದ ಅಮೇರಿಕದ ಲುಯಿಫಿಶರರು ಕಂಠೋಕ್ತವಾಗಿ ನುಡಿಯುತ್ತಾರೆ.

### ಸಾಮ್ರಾಜ್ಯಗಳ ಸಂಜೆ

ಇಂಗ್ಲಂಡು ಡಚ್ಚರ ಸಾಮ್ರಾಜ್ಯವಾದವನ್ನು ಎತ್ತಿ ಹಿಡಿಯಲು ಅಸಮರ್ಥವಾಗಿದೆ. ಅಮೇರಿಕವು ಡಚ್ಚ ಸಾಮ್ರಾಜ್ಯವಾದಕ್ಕೆ ಬೆಂಬಲ ನೀಡಲಾರದು. ಇಂಡೋನೇಶಿಯನ್ನರಲ್ಲಿ ಒಡಕು ಹುಟ್ಟಿಸಿ ತಮ್ಮ ಶಸ್ತ್ರ ಬಲದಿಂದ ತಮಗೆ ಪ್ರತಿಕೂಲವಿರುವ ಪಕ್ಷವನ್ನು ಹತ್ತಿಕ್ಕಲು ಸಾಧ್ಯವಿದೆ ಎಂದು ಡಚ್ಚರು ಲೆಕ್ಕಹಾಕುತ್ತಿರಬಹುದು. ಡಚ್ಚರಿಗೆ ಈ ಒಡಕು ಹುಟ್ಟಿಸಿ ಆಳುವ ಕಾರ್ಯದಲ್ಲಿ ತಾತ್ಕಾಲಿಕವಾಗಿ ಯಶಸ್ಸು ದೊರೆತರೂ ದೊರೆಯಬಹುದು. ಆದರೆ ಅವರು ಕೊನೆಗೆ ಮಣ್ಣು ಮುಕ್ಕದೇ ಹೋಗರು. ಹಿಂದುಸ್ತಾನ ಬ್ರಹ್ಮದೇಶಗಳಿಂದ ಬ್ರಿಟಿಶ ಸಾಮ್ರಾಜ್ಯಶಾಹಿಯು ಕಾಲು ಕಿತ್ತದ್ದರಿಂದ ಏಶಿಯದಲ್ಲಿ ಪಾಶ್ಚಾತ್ಯರ ಸಾಮ್ರಾಜ್ಯದ ದಿನಗಳೇ ಮುಗಿದಂತಾದವು. ಡಚ್ಚರು, ಫ್ರೆಂಚರು, ಪೋರ್ತುಗೀಜರು ಏಶಿಯದಿಂದ ಗಂಟುಮೂಟೆ ಕಿತ್ತು ಬರಲು ಕೆಲ ದಿನಗಳ ಅವಧಿ ಹಿಡಿಯಬಹುದು– ಇಷ್ಟೆ! ಏಶಿಯದಲ್ಲಿ ಅವರ ಸಾಮ್ರಾಜ್ಯದ ದಿನಗಳು ಮುಗಿದಂತಾಗಿದ್ದರೂ ಅವರು ಇನ್ನೂ ಮೀನಮೇಷ ಮಾಡುತ್ತ ಕಾಲ ವಿಲಂಬ ಮಾಡಿದಂತೆ ಅವರು ಹೆಚ್ಚು ಅವಮರ್ಯಾದೆಗೆ ಗುರಿಯಾಗಿ ಅಲ್ಲಿಂದ ಹೊರಗೆ ಹಾಕಿಸಿಕೊಂಡು ಬರಬೇಕಾಗುವದು. ಈ ಸ್ಪಷ್ಟ ಚಿತ್ರವು ಫ್ರಾನ್ಸ ಅಥವಾ ಡಚ್ಚ ಸರಕಾರಗಳಿಗೆ ಕಾಣದಿದ್ದುದು ಅವರ ದುರ್ದೈವ.

ಸಾಮ್ರಾಜ್ಯವಾದಿಗಳು ವಸಾಹತುಗಳಲ್ಲಿ ತಾವು ಕಾಲೂರಿ ನಿಲ್ಲಲಾರದಷ್ಟು ಪ್ರಖರ ದ್ವೇಷವು ಬೆಳೆಯುವ ವರೆಗೆ ತಮ್ಮ ಧೋರಣ ಬದಲಿಸಲಿಚ್ಛಿಸದಿರುವದರಿಂದ ತಮ್ಮ ಕಾಲ ಮೇಲೆ ತಾವೇ ಕಲ್ಲು ಹಾಕಿಕೊಳ್ಳುತ್ತಿದ್ದಾರೆ. ಸಾಮ್ರಾಜ್ಯಾಂತರ ವಸಾಹತು ಹಾಗೂ ಸಾಮ್ರಾಜ್ಯವಾದಿ ರಾಷ್ಟ್ರ ಇವುಗಳ ಸಂಬಂಧವು ಗುಲಾಮ ಮತ್ತು ಒಡೆಯ ಈ ರೀತಿಯಲ್ಲಿರುವದರಿಂದ ಈ ಸಂಬಂಧವನ್ನು ಹರಿದೊಗೆಯಲು ವಸಾಹತುಗಳು ಚಡಪಡಿಸುತ್ತಲಿರುವವು. ಆದರೆ ಈ ಸ್ವಾಮಿಭೃತ್ಯ ಸಂಬಂಧವನ್ನು ತಪ್ಪಿಸಿ ಮಿತ್ರ ಭಾವ ಬೆಳೆಸಲು ಸ್ನೇಹ ಸೌಹಾರ್ದ ಧೋರಣೆ ವಹಿಸಿದರೆ ಸಾಧ್ಯವಿರುವದು. ಡಚ್ಚರು ಇಂಡೊನೇಶಿಯದಲ್ಲಿ ರಾಜಕೀಯ ಪ್ರಭುತ್ವ, ಆರ್ಥಿಕ ಗುತ್ತಿಗೆಯ ಪದ್ಧತಿಯಿಂದ ನಡೆಸಿದ ಸುಲಿಗೆ, ಇವುಗಳನ್ನು ಬಿಟ್ಟರೆ ಇಂಡೊನೇಶಿಯದೊಡನೆ ಮಿತ್ರತ್ವ ಸಂಬಂಧ ಉಳಿಸಿಕೊಳ್ಳಲು ಇನ್ನೂ ಅವಕಾಶವಿದೆ. ಆದರೆ ಡಚ್ಚರು ಕೈಯಲ್ಲಿ ಟಾಮಿ ಗನ್ನು ಹಿಡಿದು ಇಂಡೊನೇಶಿಯದಲ್ಲಿ ಕಾಲೂರಿ ನಿಲ್ಲಬಯಸಿದರೆ ಅಲ್ಲಿಯ ಪ್ರಜೆಗಳು ಕೊನೆಗೆ ಅವರನ್ನು ಗಂಟುಮೂಟೆ ಕಟ್ಟಿ, ಅರ್ಧಚಂದ್ರ ಕೊಟ್ಟು ದಬ್ಬದೆ ಬಿಡಲಾರರು. ಹೀಗಾದರೆ ಡಚ್ಚರು ಇಂಡೊನೇಶಿಯನ್ನರೊಡನೆ ಮುಂದೆ ಆರ್ಥಿಕ, ಸಾಂಸ್ಕೃತಿಕ ಯಾವದೇ ಬಗೆಯ ಸಂಬಂಧ ಇಟ್ಟುಕೊಳ್ಳಲು ಮಾರ್ಗವೇ ಉಳಿಯಲಾರದು.

೧೭೭೬ ರಲ್ಲಿ ಅಮೇರಿಕದ ೧೩ ಸಂಸ್ಥಾನಗಳು ಬ್ರಿಟಿಶ ವಾಣಿಜ್ಯ ಸಾಮ್ರಾಜ್ಯ ಪದ್ಧತಿಯನ್ನು ಪ್ರತಿಭಟಿಸಿ, ಸ್ಟಾಂಪ ಟ್ಯಾಕ್ಸ, ಚಹಾ ಆಯಾತ, ಬ್ರಿಟಿಶ ವ್ಯಾಪಾರಕ್ಕಿರುವ ಹೆಚ್ಚಿನ ಸವಲತ್ತು ಇವುಗಳನ್ನು ಕಿತ್ತುಹಾಕಲು ಬಂಡಾಯ ಹೂಡಿದವು. ೧೭೫ ವರ್ಷಗಳ ನಂತರ ಇಂಡೊನೇಶಿಯದ ಜನರು ಡಚ್ಚರ ವಿರುದ್ಧ ಅದೇ ರೀತಿಯ ಬಂಡಾಯಹೂಡಿದ್ದಾರೆ. ೧೮ ಮತ್ತು ೧೯ನೆಯ ಶತಮಾನಗಳ ವ್ಯಾಪಾರಿ ಸಾಮ್ರಾಜ್ಯವಾದದ ಆ ಹಳೆಯ ದಿನಗಳು ಸತ್ತು ಹೋಗಿವೆ. ಈಗ ಸ್ವತಂತ್ರವಾದ ಏಶಿಯ, ಆಫ್ರಿಕಾ, ಅಮೇರಿಕ ಯುರೋಪ ಈ ಎಲ್ಲ ರಾಷ್ಟ್ರಗಳ ಜನರೂ ಒಕ್ಕಟ್ಟಿನಿಂದ, ಬಲಪಟ್ಟು ಜಾಣತನದಿಂದ ರಸಿಯ, ಅಮೇರಿಕಾ ಈ ಎರಡು ರಾಷ್ಟ್ರಗಳು ಸಾಮ್ರಾಜ್ಯ ಲೋಭದಿಂದ ನಡೆಸಿದ ಆಕ್ರಮಣ ತಡೆಯಲು ಪ್ರಯತ್ನಿಸಬೇಕು. ರಸಿಯ ದೇಶವು ಶಸ್ತ್ರಾಸ್ತ್ರ ಬಲ ಹಾಗೂ ಕಮ್ಯುನಿಜಂ ತತ್ವದ ಪ್ರಚಾರ, ಇವುಗಳಿಂದ ಸಾಮ್ರಾಜ್ಯ ಕಟ್ಟ ಬಯಸುತ್ತಿದ್ದರೆ, ಅಮೇರಿಕವು ಹಣ ಮತ್ತು ಸರಕುಗಳನ್ನು ಕೊಟ್ಟು ಸಾಮ್ರಾಜ್ಯ ಕಟ್ಟುವ ಗುತ್ತಿಗಾರಿಕೆಯಲ್ಲಿದೆ.

### ಪ್ರತಿಭಟನೆಯ ಅಸ್ತ್ರ

ಹುಡುಗಾಟಿಕೆಯಿಂದ ಕೆಲವೊಂದು ಘೋಷಣೆ ಮಾಡುವದರಿಂದ ಈ ಸಾಮ್ರಾಜ್ಯವಾದಿಗಳನ್ನು ತಡೆಯುವದು ಅಸಾಧ್ಯ. ರಾಷ್ಟ್ರೀಯತ್ವದಿಂದ ಸಾಮ್ರಾಜ್ಯವಾದಕ್ಕೆ ಪುಷ್ಟಿ ದೊರೆಯುವದು. ಸಾಮ್ರಾಜ್ಯವಾದವನ್ನು ಪ್ರತಿಭಟಿಸುವ ದಿವ್ಯಾಸ್ತ್ರವೆಂದರೆ ಅಂತರರಾಷ್ಟ್ರೀಯ ಸಂಘಟನೆ ಇಬ್ಬರು ಸಾಮ್ರಾಜ್ಯವಾದಿಗಳಲ್ಲಿ ಯಾವದಾದರೊಬ್ಬ ಸಾಮ್ರಾಜ್ಯವಾದಿಯ ಗುಂಪಿಗೆ ಸೇರಿಕೊಳ್ಳುವದರಿಂದ ಇಲ್ಲವೆ ಒಬ್ಬನ ವಿರುದ್ಧ ಇನ್ನೊಬ್ಬನನ್ನು ಎತ್ತಿಹಿಡಿದು ಇಬ್ಬರೂ ಸಾಮ್ರಾಜ್ಯವಾದಿಗಳ ಶಕ್ತಿಯನ್ನು ಸಮತೋಲವಾಗಿಡುವದರಿಂದ ಸುರಕ್ಷಿತವಾಗಿರಬಹುದೆಂದು ಭಾವಿಸುವದು ಮೂರ್ಖತನ. ಸುರಕ್ಷಿತತೆ, ಭದ್ರತೆ ಇವು ಯಾವದೇ ಕೇವಲ ಒಂದು ರಾಷ್ಟ್ರದ ಶಕ್ತಿಯನ್ನು ಬೆಳೆಸುವದರಿಂದ ಸುರಕ್ಷಿತತೆಯು ಪ್ರಾಪ್ತವಾಗುವದೆಂಬದು ಭ್ರಮ ಎಂಬ ಮಾತು ಮೊನ್ನಿನ ಜಾಗತಿಕ ಯುದ್ಧದಿಂದ ಸಿದ್ಧವಾಗಿದೆ. ರಶಿಯದಂಥ ಪ್ರಬಲರಾಷ್ಟ್ರವೂ ಕೂಡ ಎಷ್ಟೇ ಬಲಾಢ್ಯವಿದ್ದರೂ ಒಂಟಿಯಾಗಿ ವೈರಿಯನ್ನು ಎದುರಿಸುವದು ಅಸಾಧ್ಯವಾಗಿ ಪರಿಣಮಿಸಿತು. ಆದುದರಿಂದ ಬಲಾಢ್ಯವಾದ ಅಂತರ್‌ರಾಷ್ಟ್ರೀಯ ಸಂಸ್ಥೆಯನ್ನು ಕಟ್ಟುವದರಿಂದಲೇ ಎಲ್ಲ ರಾಷ್ಟ್ರಗಳಿಗೆ ಭದ್ರವಾದ ಸಂರಕ್ಷಣೆಯ ಭರವಸೆ ದೊರೆಯಬಹುದು. ಇಂಥ ಸಂಸ್ಥೆಯಾದ ಯುಕ್ತರಾಷ್ಟ್ರ ಸಂಘವು ರಶಿಯದ ಪ್ರತಿಬಂಧಾಧಿಕಾರ ಇಲ್ಲವೆ ಅಮೇರಿಕೆಯ ಬಲ ಇವುಗಳಿಗೆ ತಲೆಬಾಗಿಸದಷ್ಟು ಪ್ರಬಲವಾಗಿರಬೇಕು.

### ಏಶಿಯದ ಪ್ರಸಾದನ

ಏಶಿಯ ರಾಷ್ಟ್ರಗಳನ್ನು ತಮ್ಮೆಡೆಗೆ ಒಲಿಸಿಕೊಳ್ಳುವ ಪ್ರಯತ್ನವನ್ನು ರಶಿಯ, ಅಮೇರಿಕ ಎರಡೂ ರಾಷ್ಟ್ರಗಳೂ ಒಳ್ಳೆಯ ಆಸ್ಥೆಯಿಂದ ನಡೆಸಿವೆ. ಈ ಮಾತಿನ ದೃಷ್ಟಾಂತವನ್ನು ನೋಡಬೇಕಾದರೆ ಯುಕ್ತರಾಷ್ಟ್ರ ಸಂಘದ ಭದ್ರತಾಮಂಡಲದೆದುರು ಇಂಡೊನೇಶಿಯದ ಪಕ್ಷ ಪ್ರತಿಪಾದನೆಗೆ ಆ ರಾಷ್ಟ್ರದ ಹಿಂದಿನ ಮುಖ್ಯ ಮಂತ್ರಿಯಾದ ಸುಲ್ತಾನ ಶಹರೀರರಿಗೆ ಆಮಂತ್ರಣ ಕೊಡತಕ್ಕದ್ದೆಂಬ ಗೊತ್ತುವಳಿಗೆ ೮ ಅನುಕೂಲ ೩ ಪ್ರತಿಕೂಲ ಮತಬಿದ್ದು ಅದು ಸ್ವೀಕೃತವಾದುದನ್ನು ಎತ್ತಿ ತೋರಿಸಬಹುದು ಬ್ರಿಟನ, ಫ್ರಾನ್ಸ, ಬೆಲ್ಜಿಯಂ ಈ ಮೂವರು ಸಾಮ್ರಾಜ್ಯವಾದಿಗಳು ವಿರುದ್ಧ ಮತಕೊಟ್ಟರೂ ರಶಿಯ, ಅಮೇರಿಕ ಈ ಎರಡೂ ರಾಷ್ಟ್ರಗಳೂ ಇಂಡೋನೇಶಿಯಕ್ಕೆ ತನ್ನ ಪಕ್ಷ ಪ್ರತಿಪಾದನೆಯ ಹಕ್ಕು ಇದೆ ಎಂದು ಪ್ರತಿಪಾದಿಸಿದ್ದು ವಿಚಾರಾರ್ಹವಾಗಿದೆ.

ಕೊರಿಯದ ಬಗ್ಗೆ ಅಮೇರಿಕ ರಶಿಯಗಳು ಪ್ರಕಟನೆ, ಪ್ರತಿಪ್ರಕಟನೆ ಹೊರಡಿಸಿ ಎಬ್ಬಿಸಿದ ವಾದವನ್ನು ನೋಡಿದರೆ ಜಗತ್ತು ಇಬ್ಭಾಗವಾಗುವದೆಂದೂ, ಅದರಂತೆ ಕೊರಿಯವೂ ವಿಭಜನೆ ಹೊಂದಬಹುದೆಂದೂ ಅನಿಸದಿಂದು. ಪ್ರತಿಯೊಂದು ಏಶಿಯರಾಷ್ಟ್ರಕ್ಕೂ ಈ ಪ್ರಶ್ನೆಯು ಒಂದು ಸಮಸ್ಯೆಯಾಗಿರುವದು. ಏಶಿಯಖಂಡದ ರಾಷ್ಟ್ರಗಳು ಯಾವದೇ ಒಂದು ಸಾಮ್ರಾಜ್ಯವಾದಿಯ ಪಕ್ಷದಲ್ಲಿ ಸೇರುವದರಿಂದ ಈ ಸಮಸ್ಯೆ ಸಮಾಧಾನಕರವಾಗಿ ಬಿಡಿಸಲ್ಪಡದೆ, ಎಲ್ಲ ಏಶಿಯಖಂಡದ ರಾಷ್ಟ್ರಗಳೂ ಸೇರಿ ಶುದ್ಧ ಪ್ರಜಾಪ್ರಭುತ್ವ ತಳಹದಿಯ ಮೇಲೆ ಅಂತರ್‌ರಾಷ್ಟ್ರೀಯ ಧೋರಣ ವಹಿಸುವದರಿಂದ ಮಾತ್ರ ಸಾಧ್ಯವಿದೆ.

### ಸ್ನೇಹವೋ ದಾಸ್ಯವೋ ?

ಜೆಕೋಸ್ಲೊವಾಕಿಯ, ಪೋಲಂಡಗಳು ಮೊದಲು ಮಾರ್ಶಲ ಯೋಜನೆಯ ಪರಿಶೀಲನೆಗಾಗಿ ಕರೆದ ಪ್ಯಾರಿಸ ಪರಿಷತ್ತಿಗೆ ಒಪ್ಪಿ ಅದರಂತೆ ತಿಳಿಸಿದ್ದರೂ ಕೂಡ ಸ್ಟಾಲಿನ್ನರು ಈ ರಾಷ್ಟ್ರಗಳು ಪ್ಯಾರಿಸ ಪರಿಷತ್ತಿಗೆ ಹೋಗಕೂಡದೆಂದು ವರ್ಚ ಉಪಯೋಗಿಸಿದ್ದು, ಲೇಕಸಕ್ಸೆಸದಲ್ಲಿ ರಶಿಯದ ಪ್ರತಿನಿಧಿಗಳು ವಹಿಸಿದ ಧೋರಣ ಇವುಗಳಿಂದ ರಶಿಯವು 'ಮಿತ್ರರಾಷ್ಟ್ರಗಳ' ಬಗ್ಗೆ ಯಾವ ಧೋರಣವನ್ನಿಟ್ಟುಕೊಂಡಿದೆ ಎಂಬದು ವಿದಿತವಾಗುವದು. ರಶಿಯ ದೇಶವು ತನ್ನೊಡನೆ ಮಿತ್ರತ್ವ ವಹಿಸುವದೆಂದರೆ ತನಗೆ ವಿಧೇಯವಾಗಿರುವುದೆಂದು ಹೇಳುತ್ತಿರುವಂತೆ ತೋರುವದು. ಅಮೇರಿಕೆಯ ಆರ್ಥಿಕ ಸಾಮ್ರಾಜ್ಯ ಧೋರಣದಲ್ಲಿ ಬೇಕಾದ ರಾಷ್ಟ್ರವು ಅಮೇರಿಕೆಯ ಡಾಲರ ನಿರಾಕರಿಸಲು ಅವಕಾಶವಿದೆ.

ಭ್ರಮನಿರಸನವಾಗಲು ಬಹಳ ಕಾಲಾವಧಿ ಬೇಕು. ಒಳ್ಳೆ ಬುದ್ಧಿಜೀವಿಗಳೆನ್ನಿಸಿಕೊಂಡವರೂ ಕೂಡ ಸೋವಿಯಟ ಯೂನಿಯನ್ನು ಹಿಂದೊಮ್ಮೆ ಝಾರ ಸಾಮ್ರಾಜ್ಯಶಾಹಿಯನ್ನು ನಿರ್ನಾಮಮಾಡಿ ಜನ್ಮತಾಳಿದ ಸಂಗತಿಯನ್ನೇ ಇನ್ನೂ ನಂಬಿ ಸೋವಿಯಟ ಸರಕಾರವೆಂದರೆ ಸಾಮ್ರಾಜ್ಯಶಾಹಿಯ ವೈರಿ, ಅದಕ್ಕೆ ಸಾಮ್ರಾಜ್ಯವಾದದ ಆರೋಪ ಕೊಡುವದು ಸರಿಯಲ್ಲವೆಂಬ ಭಾವನೆ ಮಾಡಿಕೊಂಡಿದ್ದಾರೆ. ಆದರೆ ಆ ಸಾಮ್ರಾಜ್ಯ ವಿರೋಧಿ ವೃತ್ತಿಯ ಸೋವಿಯಟ ರಶಿಯ ರಾಷ್ಟ್ರವು ಪೋಲಂಡಿನ ಮೇಲೆ ಹಿಟ್ಲರನೊಡನೆ ಒಪ್ಪಂದ ಮಾಡಿಕೊಂಡು ನುಗ್ಗಿದಾಗಲೇ ಸತ್ತುಹೋಗಿದೆ. ಹಂಗರೀ, ರುಮೇನಿಯ ಮೊದಲಾದ ದುರ್ಬಲ ರಾಷ್ಟ್ರಗಳನ್ನು ತನ್ನ ವರ್ಚಸ್ಸಿಗೆ ತಲೆಬಾಗಲು ಹಚ್ಚಿ ಅವುಗಳನ್ನು ತನ್ನ ಅಂಕಿತದಲ್ಲಿರಮಾಡಿದ ರಸಿಯದ ಧೋರಣೆಯು ಸಾಮ್ರಾಜ್ಯವಾದಿ ಧೋರಣೆಯಲ್ಲದೆ ಮತ್ತೇನು ? ಯಾರಿಗೆ ಈ ಮಾತಿಲ್ಲಿ ವಿಶ್ವಾಸವಿಲ್ಲವೋ ಅಂಥವರು ಪೂರ್ವ ಮತ್ತು ಮಧ್ಯ ಯುರೋಪಿಗೆ ಒಮ್ಮೆ ಹೋಗಿ ಅಲ್ಲಿ ರಸಿಯದ ಬಾಲಾಗಸಿಯಾದ ರಾಷ್ಟ್ರಗಳ ಪ್ರತಿನಿಧಿಗಳೊಡನೆ ಮಾತಾಡಿದರೆ ನಿಜಾಂಶ ತಿಳಿದು ಬರುವದು.

### ಪಾಶ್ಚಾತ್ಯರ ಬಗೆಗೆ ತಿರಸ್ಕಾರ

ಪಾಶ್ಚಾತ್ಯ ರಾಷ್ಟ್ರಗಳ ಜನರು ಏಶಿಯದಲ್ಲಿ ಈ ವರೆಗೆ ಅನುಸರಿಸುತ್ತ ಬಂದ ಸಾಮ್ರಾಜ್ಯವಾದೀ ಧೋರಣದಿಂದ ಏಶಿಯದ ಜನಾಂಗದವರಿಗೆ ಯುರೋಪಿಯನ್ನ ರಾಷ್ಟ್ರಗಳ ಬಗ್ಗೆ ಮನಸ್ಸಿನಲ್ಲಿ ವಿಷ ತುಂಬಿ ಹೋಗಿದೆ. ಚರ್ಚಿಲ್ಲ– ಆಟ್ಲಿ – ಬ್ಲುಮ್-ದಾಲಾದೀರ ಇವರಲ್ಲಿ ಪೌರಸ್ತ್ಯರು ಭೇದವನ್ನೇ ಕಾಣರು. ಅವರು 'ಲಂಕೆಯಲ್ಲಿ ಹುಟ್ಟಿದವರೆಲ್ಲ ರಾವಣರು' ಎಂಬ ಭಾವನೆಯನ್ನಿಟ್ಟುಕೊಂಡಿದ್ದಾರೆ. ಪಾಶ್ಚಾತ್ಯ ಸಾಮ್ರಾಜ್ಯಶಾಹಿಯ ವಿರೋಧವಾಗಿ ಪೌರಸ್ತ್ಯರಲ್ಲಿರುವ ದ್ವೇಷ ಭಾವನೆಯ ಮೂಲಕ ಎಲ್ಲ ಪೌರಸ್ತ್ಯ ರಾಷ್ಟ್ರಗಳೂ ಸ್ವಾಭಾವಿಕವಾಗಿ ಪಾಶ್ಚಾತ್ಯ ಸಾಮ್ರಾಜ್ಯಶಾಹಿಯ ವಿರೋಧಿಯೆಂದು ಗಣಿಸಲಾದ ರಶಿಯದ ಬಗ್ಗೆ ಆದರ ವಹಿಸಿವೆ. ಆದರೆ ರಶಿಯ ರಾಷ್ಟ್ರವೂ ಆಕ್ರಮಣಶೀಲ ರಾಷ್ಟ್ರ. ಅದರ ಆಕ್ರಮಣದ ಧೋರಣವು ತೀರ ನಿರ್ದಯತನದ್ದು ಎಂಬ ಮಾತನ್ನು ಪೌರಸ್ತ್ಯರು ಚೆನ್ನಾಗಿ ಮನದಂಬು ರಶಿಯದ ಸಾಮ್ರಾಜ್ಯವಾದೀ ಧೋರಣ, ಇತರ ರಾಷ್ಟ್ರಗಳ ಸಾಮ್ರಾಜ್ಯವಾದೀ ಧೋರಣ ಇವನ್ನು ತೂಗಿ ನೋಡುವ ಮುಂಜಾಗ್ರತೆ ವಹಿಸುವದು ಕ್ಷೇಮಕರ.

ಪಾಶ್ಚಾತ್ಯರು ಪೌರಸ್ತ್ಯರ ಪ್ರೇಮಸಂಪಾದನೆಯ ಅಧಿಕಾರವನ್ನು ತಮ್ಮ ಕೃತಿಗಳಿಂದ ಕಳೆದುಕೊಂಡಿದ್ದಾರೆ. ಆದರೆ ಪೌರಸ್ತ್ಯರು ತಮ್ಮಲ್ಲಿ ಪಾಶ್ಚಾತ್ಯರ ವಿರುದ್ಧ ಇರುವ ದ್ವೇಷಭಾವನೆಯನ್ನೇ ದೊಡ್ಡದುಮಾಡಿ ತಮ್ಮ ಧೋರಣ ನಿರ್ಧರಿಸಲಿಚ್ಛಿಸಿದರೆ ತಮ್ಮ ಕಾಲ

–೨ನೇ ಪುಟಕ್ಕೆ

ನಾಡಿಕೆಯಂತೆ ಗಣೇಶ ಚತುರ್ಥಿ ನಿಮಿತ್ತ ತಾ. ೨೨-೯-೪೭ ರ 'ಕರ್ಮವೀರ' ಸಂಚಿಕೆ ಹೊರಡುವದಿಲ್ಲ.

—ವ್ಯವಸ್ಥಾಪಕ,
ಕರ್ಮವೀರ

# ವಾಲ್ಡಾರ್ಫ್ ಆಸ್ಟೋರಿಯ

## ಭೋಗಸಾಮ್ರಾಜ್ಯ— ಭೂವೈಕುಂಠ!

ಲೇ:- ಶ್ರೀ ನಾಡಿಗ ಕೃಷ್ಣಮೂರ್ತಿ

—ವಿಶೇಷ ಲೇಖನ ೪— ಛ

ನ್ಯೂಯಾರ್ಕ್‌ನಗರಕ್ಕೆ ಭೂಷಣವಾಗಿದೆ ಈ ಹೊಟೇಲ್—ವಾಲ್ಡಾರ್ಫ್ ಆಸ್ಟೋರಿಯ! ವಿಲಾಸ ವೊಂದು ಕುಬೇರರ ವಾಸಗೃಹ, ವಿಲಾಸ ಗೃಹ. ಪ್ರಪಂಚದ ಪ್ರಥಮಶ್ರೇಣಿಯ ಶ್ರೀಮಂತರು ಅಥಾರ್ತ್ Fifth Avenue Shoppers- ೫ ನೆಯ ರಸ್ತೆಯ ವ್ಯಾಪಾರಿಗಳು ಇಲ್ಲಿ ಉಳಿದುಕೊಳ್ಳತಕ್ಕವರು. ಇತ್ತೀಚೆಗೆ ಸಂಯುಕ್ತರಾಷ್ಟ್ರ ಸಂಘದ ಪ್ರತಿನಿಧಿಗಳು ಇಲ್ಲಿಯೇ ಉಳಿದುಕೊಳ್ಳುತ್ತಾರೆ. ಬರೋಡೆಯ ಮಹಾರಾಜರು ಬಂದಾಗ ಸಪತ್ನೀಕರಾಗಿ ಇಲ್ಲೇ ಉಳಿದಿದ್ದರು. ಬ್ರಿಟನ್ನಿನ 'ಪ್ರೇಮ ಭೂಪತಿ' ಡ್ಯೂಕ್ ಆಫ್ ವಿಂಡ್ಸರರು ಇಲ್ಲಿಯೇ ಬಿಡಾರ ಮಾಡಿದ್ದರು. ಮೊನ್ನೆ ಮೇ ಯಲ್ಲಿ ನಮ್ಮ ರಾಯಭಾರಿ ಅಸಫ್ ಅಲಿಯವರೂ ಅಲ್ಲೇ ತಂಗಿದ್ದರು!

ಈ ಪ್ರಪಂಚದಲ್ಲೆಲ್ಲ ಅತ್ಯಂತ ದೊಡ್ಡದಾದ ಈ ಭೋಗ ಮಂದಿರವು ೧೮೯೩ ರಲ್ಲಿ ಪ್ರಾರಂಭವಾಯಿತು! ಇದರ ವಿಸ್ತಾರ ೮೧,೩೩೭ ಚ. ಅಡಿಗಳಷ್ಟು! ಇದು ಮ್ಯಾನ್ ಹಟ್ಸ್ ದ್ವೀಪದ ಪಾರ್ಕ್ ಮತ್ತು ಲೆಕ್ಸಿಂಗ್ಟನ್ ರಾಜಮಾರ್ಗಗಳ ನಡುವೆ—ಎಂದರೆ—ನ್ಯೂಯಾರ್ಕಿನ ೪೯ಮತ್ತು ೫೦ ನೆಯ ಬೀದಿಗಳ ಮಧ್ಯದಲ್ಲಿದೆ. ಇದಕ್ಕೆ ಸುತ್ತಲು ವಿಶಾಲವಾದ ಜಗುಲಿಗಳಿದ್ದು ಗಾಳಿ ಬೆಳಕು ಹೇರಳವಾಗಿ ಬರುತ್ತವೆ. ನಗರದಲ್ಲಿ ಇದು ಅಮೇರಿಕದ ನವ್ಯ ಶಿಲ್ಪಕಲೆಯ ಮೂರ್ತಿ ಮತ್ಸ್ವರೂಪವಾಗಿ ಎದ್ದು ಕಾಣುತ್ತದೆ!

ಈ ಕಟ್ಟಡದ ನಿರ್ಮಾಣಕ್ಕೆ ಒಟ್ಟು ೨೭೦೦೦ ಟನ್ ಉಕ್ಕನ್ನು ಉಪಯೋಗಿಸಿದ್ದಾರೆ. ಕೆಳ ಗಿನ ತಳಹದಿಗೆ ೨೦೦೦ ಟನ್ ಮತ್ತು ಮೇಲಿನ ಮುಖ್ಯ ಕಟ್ಟಡಕ್ಕೆ ೨೫೦೦೦ ಟನ್ ಹೀಗೆ ಉಪ ಯೋಗಿಸಿದ್ದಾರೆ. ಇದಲ್ಲದೆ ೮೦,೦೦೦ ಟನ್ ಸುಣ್ಣದ ಹರಳು, ೩೦೦೦,೦೦೦ ಇಟ್ಟಿಗೆಗಳು ೮೦೦೦,೦೦೦ ವಜ್ರದ ಕಲ್ಲುಗಳು! ಈ ಕಟ್ಟಡದ ಅಸ್ತಿವಾರಕ್ಕೆ ತಾಮ್ರ, ಕಂಚು, ಅಲ್ಲಲ್ಲಿ ಉಪ ಯೋಗಿಸಲ್ಪಟ್ಟಿವೆ. ನೈಸ್ ಸಾಮಂಡ್ ಸನ್ ತಯಾರಿಸಿದ ಕಂಚಿನ ವಿಗ್ರಹವೊಂದು, ಪಾರ್ಕ ಅವೆನ್ಯೂ ಮುಂಭಾಗದ ಬಾಗಿಲಮೇಲಿದೆ. ಒಳಗಡೆಯ ಕಟ್ಟಡದ ಅಂದ ಸಂಗಮವರಿ ಕಲ್ಲಿನಿಂದ ಹೆಚ್ಚಾಗಿದೆ. ಅಧುನಿಕ ರೀತಿಯಲ್ಲಿ ಎಲ್ಲ ಕೊಠಡಿಗಳನ್ನು ಶೃಂಗರಿಸಿದ್ದಾರೆ. ಶ್ರೀ ಸ್ಮಲ್ಪ ಮತ್ತು ವೀವರ್ ಎಂಬುವರೇ ಈ ಕಟ್ಟಡದ ಚಿತ್ರವನ್ನು ತಯಾರಿಸಿದ ಶಿಲ್ಪಿಗಳು ಥಾಮ್ಸನ್- ಸ್ಟಾರೆಟ್ ಕಂಪೆನಿಯವರು ಈ ಕಟ್ಟಡವನ್ನು ಕಟ್ಟಿದರು.

ಈ ಉಪಹಾರ ಗೃಹಕ್ಕೆ ಮೂರು ದಿಕ್ಕಿನಿಂದ ಬರಲು ಬಾಗಿಲುಗಳಿವೆ. ಅದಾರಿಗಳು ಮಹಡಿಗೆ ಏರಲು ಬಾಗಿಲುಗಳಿವೆ. ಏರುದೊಟ್ಟಲಿಗೆ ಕ ರೆ ಹತ್ತುವ Elevator- ಏರುದೊಟ್ಟಲಿಗೆ ಕರೆದೊಯ್ಯುವವು. ದಾರಿಯಲ್ಲಿ ಅಂಗಡಿಗಳು ಕಾಣಿಸಿಕೊಳ್ಳುವ ಸೋಫಾಗಳು, ಪೋಸ್ಟಾಫೀಸು, ಆಸ್ಪತ್ರೆ, ಟೆಲಿಗ್ರಾಫ್ ಆಫೀಸು, ವಿಮಾನ, ರೈಲು, ಬಸ್ಸು ಟಿಕೆಟ್ಟು ಕೊಡುವ ಕಚೇರಿಗಳು ಹತ್ತುತ್ತವೆ ಇವೆಲ್ಲವೂ ಹೊಟೇಲಿನಒಳಗಡೆಯೇ! ಮುಖ್ಯವಾದ ಸಭಾಗೃಹದಲ್ಲಿ, ಕ್ಲಿಯೋಪಾತ್ರ, ಸಿನೇರಾ, ಮತ್ತು ಪೊಂಪೆಯ ವಿಗ್ರಹಗಳು ವಿರಾಜಿಸಿವೆ. ಈ ಸಭಾಗೃಹದಲ್ಲಿ ಹಾಸಿದ ಜಮಖಾನ ಫ್ರಾನ್ಸ್ ದೇಶದಿಂದ ಬಂದಿದೆ. ೮೨ ಅಡಿಉದ್ದ ೨೨ ಅಡಿ ಅಗಲ ವಿರುವ ಸಭಾಗೃಹಕ್ಕೆ ೪೯ ಅಡಿ ಅಗಲ ೬೯ ಅಡಿ ಉದ್ದ ವಿರುವ ಜಮಖಾನೆ ತಯಾರಿಸಲು ಒಂದು ವರ್ಷ ಬೇಕಾಯಿತಂತೆ. ಜಮಖಾನೆಯಲ್ಲಿ ಹೆಣೆದಿರುವ ಶಿಲ್ಪಕಲೆ ಸ್ಕಾಂಡಿನೇವಿಯ ದೇಶದ ರೀತಿಯದು ಈ ಜಮಖಾನ ತಯಾರಿಸಿದ ಶಿಲ್ಪಿಗಳ ಗುಂಪು ಫ್ರಾನ್ಸಿನ ನಾಲ್ಕನೆಯ ಹೆನ್ರಿಯ ಕಾಲದಿಂದ ಬಂದವರಿದ್ದರಿಂದ ಅದಕ್ಕೆ ಹೆಚ್ಚು ಪ್ರಾಮುಖ್ಯ ಇಂತಹ ಜಮಖಾನ ತಯಾರಿಸಲು ಫ್ರಾನ್ಸಿನ ಇನ್ನೊಬ್ಬ ರಾಜ ೧೪ನೆಯಲೂಯಿ ಉತ್ತೇಜನವಿತ್ತು ಒಮ್ಮೆಲೆ ೯೦ ಜಮಖಾನೆಗಳನ್ನು ತನ್ನ ಅರಮನೆಗೆ ತರಿಸಿಕೊಂಡ.

ಈ ಉಪಹಾರ ಗೃಹದಲ್ಲಿ ೨೦೦೦ ಸಂಸಾರಗಳಿರಲು ಅವಕಾಶವಿದೆ. ಸ್ವಂತ ಮನೆಯಲ್ಲಿ ವಾಸಿಸುವ ರೀತಿಯಲ್ಲಿ ವಾತಾವರಣವನ್ನು ಕಲ್ಪಿಸಿರುವರಾದರೂ ಹೊಟೇಲು ಹೋಟೇಲೇ!

ಸ್ವಂತವಾಗಿ ಹೊಟೇಲಿಗೆ ಸೇರಿದ ರೇಡಿಯೋ ಯಂತ್ರವಿದೆ. ಲಂಡನ್, ಪ್ಯಾರಿಸ್ ಬರ್ಲಿನ್, ಮಾಸ್ಕೋ, ಟೋಕಿಯೋ, ಅಸ್ಟ್ರೇಲಿಯಾ, ದಕ್ಷಿಣ ಆಫ್ರಿಕ, ದಕ್ಷಿಣ ಅಮೇರಿಕಗಳಿಂದ ರೇಡಿಯೋ ಕೇಳಬಹುದು.

ಉಪಹಾರಗೃಹದ ಉತ್ತರ ದಕ್ಷಿಣಭಾಗಗಳಲ್ಲಿ ದೊಡ್ಡದಾದ ನರ್ತನಶಾಲೆಗಳಿವೆ. ಅವುಗಳಿಗೆ ಹೊಂದಿಕೊಂಡು ಫಲಾಹಾರ ಮಂದಿರಗಳೂ ಊಟದ ಸಭಾಗೃಹಗಳೂ ಇವೆ. ಮೇ ತಿಂಗಳಲ್ಲಿ ಇಲ್ಲಿ ಎರಡು ಅದ್ಭುತ ರಾಜಕೀಯ ಭೋಜನಗಳು ನಡೆದವು. ಒಂದನ್ನು ನ್ಯೂಯಾರ್ಕಿನ ಗವರ್ನರ್ ಥಾಮಸ್ ಡ್ಯೂಯಿಯ ಅಧ್ಯಕ್ಷ ಚುನಾವಣೆಯ ಉಮೇದುವಾರಿಕೆಯ ಮೊದಲಿನಹಂತವಾಗಿಯೂ, ಇನ್ನೊಂದನ್ನು ನ್ಯೂಯಾರ್ಕಿನ ಮೇಯರರಾದ ವಿಲಿಯಂ ಓ ಡ್ವೈಯರರು ಪ್ರಜಾಪಕ್ಷದವಾರರ ಪರವಾಗಿ ಕೊಟ್ಟಿದ್ದರು. ಥಾಮಸ್ ಡ್ಯೂಯಿಯ ಭೋಜನಕ್ಕೆ ಬರುವವರ ಪ್ಲೇಟಿಗೆ ೫೦ ಡಾಲರು ಬೆಲೆ. ಅವರು ಎಷ್ಟೆಂದರೂ ರಿಪಬ್ಲಿಕನ್. ಮೇಯರರ ಭೋಜನದ ಪ್ಲೇಟಿಗೆ ೧೦೦ಡಾಲರು! ಈ ಹಣ ಪಕ್ಷಗಳ ಕೆಲಸಕ್ಕೆ ಉಪಯೋಗಿಸುತ್ತಾರೆ. ಇಬ್ಬರ ಭೋಜನಕ್ಕೂ ೧೦೦೦ ಅಮೇರಿಕನ್ನರು ಹೋಗಿದ್ದರು.

ಈ ಹೊಟೇಲಿಗೆ ಬರುವ ನಾನಾ ದೇಶದ ಜನರ ಉಪಯೋಗಕ್ಕಾಗಿ ಅನೇಕ ಏರ್ಪಾಡುಗಳನ್ನು ಮಾಡಿದ್ದಾರೆ.

(೧) ವಿದೇಶಾಂಗ ಕಚೇರಿ— ಇಲ್ಲಿ ಪರದೇಶಗಳಿಂದ ಹಲವಾರು ಭಾಷೆಗಳನ್ನು ಮಾತಾಡುವ ಜನರ ಕಷ್ಟಗಳನ್ನು ನೀಗಿಸಲು ಸುಮಾರಾಗಿ ಪ್ರಪಂಚದ ಮುಖ್ಯ ಭಾಷೆಗಳು ಬರುವವರನ್ನು ನೇಮಿಸಿದ್ದಾರೆ, ಸುಮಾರು ೨೦ಭಾಷೆ ಬರುವ ಜನರಿದ್ದಾರೆ.

(೨)ಸ್ಪಾನಿಷ್, ಪೋರ್ಚುಗೀಸ್, ಮತ್ತು ಫ್ರೆಂಚ ಮಾತನಾಡುವವರ ಉಪಯೋಗಕ್ಕಾಗಿ ವಿಶೇಷವಾಗಿ ಲ್ಯಾಟಿನ್ ಅಮೇರಿಕನ್ ಶಾಖೆ ಇದೆ.

(೩)ವೈದ್ಯಶಾಖೆ — ೧೭ನೆಯ ಮಹಡಿಯಲ್ಲಿ ವೈದ್ಯಶಾಖೆಯ ಮುಖ್ಯ ಅಸ್ಪತ್ರೆ ಇದೆ ೨೧ ನೆಯ ಮಹಡಿಯಲ್ಲಿ ದಂತವೈದ್ಯರಿದ್ದಾರೆ ಇವೆಲ್ಲವನ್ನೂ ಹೋಟೇಲಿನವರೇ ಇಟ್ಟಿದ್ದಾರೆ.

(೪)ಬ್ಯಾಂಕುಗಳು ಕೆಮಿಕಲ್ ಬ್ಯಾಂಕ ಮತ್ತು ಟ್ರಸ್ಟ ಕಂಪನಿ ಬ್ಯಾಂಕಿನ ಎಲ್ಲ ವ್ಯವಹಾರಗಳನ್ನೂ ಉಪಹಾರ ಗೃಹದವರ ಅನುಕೂಲಕ್ಕಾಗಿ ತೆರೆಯಲಾಗಿದೆ.

(೫)ಸಿನೆಮಾ ನಾಟಕಮಂದಿರ, ನರ್ತನಗಳಿಗೆ ಹೋಗಲು ಟಿಕೆಟ್ಟು ಕಚೇರಿ ಅಲ್ಲಿಯೇ ಇವೆ.

(೬) ಪ್ರಯಾಣಿಕರಿಗೆ ಬೇರೆ ಬೇರೆ ನಗರಗಳಿಗೆ ದೇಶಗಳಿಗೆ ಹೋಗಲು ಅನುಕೂಲವಾಗುವಂತೆ ಥಾಮಸ್ ಕುಕ್ ಮತ್ತು ಕಂಪನಿಯ ಕಚೇರಿ ಅಲ್ಲಿಯೇ ಇದೆ.

(೭) ಅಮೇರಿಕದ ಮನೆಗಳಲ್ಲಿ ಅಡಿಗೆ ಮಾಡುವಂತೆ ಅಡಿಗೆ ಮಾಡಿಕೊಳ್ಳಲು ವಿಶೇಷವಾದ ಅಡಿಗೆಮನೆ ಇದೆ.

(೮)ನಾನಾ ತರಹದ ಹಾರಗಳನ್ನು ತಯಾರಿಸಲು ವಿಶೇಷ ಪರಿಶ್ರಮ ಹೊಂದಿದ ತಜ್ಞರಿದ್ದಾರೆ. ಮಕ್ಕಳಿಗೆ, ರೋಗಿಗಳಿಗೆ ತಕ್ಕ ಆಹಾರವನ್ನು ಸಿದ್ಧಪಡಿಸಿಕೊಳ್ಳುವ ಅನುಕೂಲತೆ ಇದೆ.

(೯) ಬಟ್ಟೆಗಳನ್ನು ಒಗೆದು, ಇಸ್ತ್ರಿಮಾಡಿ ಒಂದೇ ದಿನದಲ್ಲಿ ಒದಗಿಸುವ ಅನುಕೂಲತೆ ೫ ನೆಯ ಮಹಡಿಯಲ್ಲಿದೆ. ಹಗಲೂ ರಾತ್ರಿ ಈ ಕೆಲಸ ನಡೆದಿರುತ್ತದೆ.

(೧೦) ಬರವಣಿಗೆ ,ಟೈಪಿಂಗ್ ಮತ್ತು ಗುಮಾಸ್ತೆಯ ಕೆಲಸಮಾಡಲು ವಿಶೇಷ ಜನರೇ ಇದ್ದಾರೆ ಇಲ್ಲಿ ಪುಸ್ತಕ ಭಂಡಾರವಿದೆ. ನ್ಯೂಯಾರ್ಕಿನ ನಕ್ಷೆ ಇದೆ. ಸಬ್‌ವೆ, ಟ್ರ್ಯಾಂ, ಬಸ್ಸು ಮುಂತಾದವುಗಳ ಸುದ್ದಿ ಇಲ್ಲಿ ಪಡೆಯಬಹುದು.

(೧೧) ಮೊದಲನೆಯ ಮಹಡಿಯಲ್ಲಿ ಸುಂದರವಾಗಿ ಅಲಂಕರಿಸಿದ ಕ್ಷೌರದ ಅಂಗಡಿ ಇದೆ. ಅದರೆ ನಗ್ನ ಚಿತ್ರಗಳನ್ನು ಗೋಡೆಗೆ ತಗಲುಹಾಕಿಲ್ಲ!

(೧೨) ಸೌಂದರ್ಯವನ್ನು ಹೆಚ್ಚಿಸಿಕೊಳ್ಳಲು ಸ್ತ್ರೀಯರ ಅನುಕೂಲಕ್ಕಾಗಿ *Beauty Saloon* (ಸೌಂದರ್ಯಶಾಲೆ) ಇದೆ.

(೧೩) ದಕ್ಷಿಣ ದಿಕ್ಕಿನಲ್ಲಿ ಒಂದು ಪುಸ್ತಕದ ಅಂಗಡಿ ಇದೆ. ಹೊಸ ಪುಸ್ತಕಗಳು ಆಗ ತಾನೇ ಪ್ರಕಟವಾದವು, ಇಲ್ಲಿ ಸಿಕ್ಕುತ್ತವೆ.

(೧೪) ಕೋಟುಗಳು,, ಗೌನುಗಳು, ಸೂಟುಗಳು, ಸ್ತ್ರೀಯರ ಬಟ್ಟೆಗಳು ಇರುವ ಅಂಗಡಿ ಇದೆ.

(೧೫) ಒಡವೆಗಳ ಅಂಗಡಿ, ನಾನಾ ದೇಶದ ನಾನಾ ತರಹದ ಒಡವೆಗಳನ್ನೊಳಗೊಂಡಿದ್ದು ನೋಡಲು ಬಲು ಚೆಂದವಾಗಿ ಕಾಣುತ್ತದೆ.

(೧೬) ಕೆಳಗಡೆಯ ಮಹಡಿಯಲ್ಲಿ ಒಬ್ಬ ಫೋಟೋ ತೆಗೆಯುವವನಿದ್ದಾನೆ. ಹಿಂದಿನ ಅಧ್ಯಕ್ಷ ರೂಸವೆಲ್ಟ್, ಡ್ಯೂಕ ಮತ್ತು ಡಚ್ಯಸ್ ಅಫ್ ವಿಂಡ್ಸರರು ಇಲ್ಲಿ ಫೋಟೊ ತೆಗೆಯಿಸಿಕೊಂಡಿದ್ದಾರೆ.

ಈ ಎಲ್ಲ ಅಂಗಡಿಗಳೂ ಹೊಟೇಲಿನ ಆಡಳಿತಕ್ಕೆ ಸೇರಿವೆ. ಇದೇ ನ್ಯೂಯಾರ್ಕಿನ ಅಧಿಕೃತ ಅರಮನೆ ಪ್ರಪಂಚದ ದೊಡ್ಡ ತರಗತಿಯ ಉಪಹಾರ ಗೃಹ- ವಾಲ್ಡಾರ್ಫ್ ಅಸ್ಟೋರಿಯಾ!

---

● ಮೋಟಾರು, ಕಾರು ಮೊದಲಾದವುಗಳ ತಯಾರಿಕೆಯು ಬ್ರಿಟನ್ನಿನ ಬಹು ದೊಡ್ಡ ಕೈಗಾರಿಕೆಗಳಲ್ಲಿ ಮೂರನೆಯದು.

# ಸಾಮ್ರಾಜ್ಯ ಸಾರ್ವಭೌಮತ್ವಗಳ ಸಂಧ್ಯಾಸಮಯ

(ಮೊದಲನೇ ಪುಟದಿಂದ)

ಹಾಕಿಕೊಂಡಂತಾಗ ಮೇಲೆ ತಾವೇ ಕಲ್ಲು ಹಾಕಿಕೊಂಡಂತಾಗಬಹುದು.

ಹಿಂದುಸ್ತಾನ, ಬ್ರಹ್ಮದೇಶ, ಇಂಡೋನೇಶಿಯ ಈ ರಾಷ್ಟ್ರಗಳಿಗೆ ಸ್ವಾತಂತ್ರ್ಯ ಪ್ರಾಪ್ತಿಯು ಪರದಾಸ್ಯವಿಮೋಚನೆಯಷ್ಟೇ ಅಲ್ಲ; ಪರದಾಸ್ಯದಿಂದ ಉಂಟಾದ ಮಾನಸಿಕ ಭಾವನೆಗಳ ವಿಮೋಚನೆಯಾಗುವದು ಅದಕ್ಕೂ ಮಹತ್ವದ್ದಾಗಿದೆ.

## ಪುರಾಣ ಕಾಲದ ಪರಿಸಮಾಪ್ತಿ

ಚಿಕಾಗೋದಲ್ಲಿ ಎಷ್ಟೋ ವರ್ಷಗಳ ಹಿಂದೆ ಒಬ್ಬ ಕುತ್ಸಿತ ಮನುಷ್ಯನು ಮೇಯರನಾಗಿದ್ದ. ಅವನು ೧೭೭೬-೧೭೮೩ ರ ಅಮೇರಿಕೆಯ ಬಂಡಾಯದ ಭಾವನೆಯ ಪ್ರತೀಕನೆಂದೇ ತಿಳಿದುಕೊಂಬಂತೆ ಅವನ ವರ್ತನೆ ಇದ್ದಿತು. ಬಂಡಾಯವಾಗಿ ಅನೇಕ ದಶಕಗಳಾಗಿ ಹೋಗಿದ್ದರೂ ಅವನು ಕಂಡಲ್ಲಿ "ಕೆಂಪು ಅಂಗಿಯ" ಬ್ರಿಟಿಶ ಜನರ ಕೊಲೆ ಮಾಡಲು ಹವಣಿಸುತ್ತಿದ್ದ. ಅವನು ಇನ್ನೂ ಸಾಮ್ರಾಜ್ಯ ವಿರೋಧಿ ವಸಾಹತಿನ ನಾಗರಿಕನೆಂಬ ಭಾವನೆ ತ್ಯಜಿಸಿರಲಿಲ್ಲ. ಅವನು ಎಷ್ಟೋ ವರ್ಷಗಳ ಹಿಂದೆ ಇದ್ದ ಪರಿಸ್ಥಿತಿಯಲ್ಲಿ ಇರಬಹುದಾದ ಭಾವನೆಯನ್ನು ಆ ಪರಿಸ್ಥಿತಿ ಆಗಿ ಹೋದ ನಂತರವೂ ಇಟ್ಟುಕೊಂಡ ವಿಕ್ಷಿಪ್ತ ವ್ಯಕ್ತಿಯಾಗಿದ್ದ.

ಅದರೆ ಒಂದು ವಾರದ ಹಿಂದೆ ಕೊನೆಗೊಂಡದ್ದರೂ ಗತಕಾಲವು ಗತಕಾಲವೇ. ಸಾಮ್ರಾಜ್ಯವಾದವು ಅಳಿಯಿತೆಂಬುದನ್ನು ಕಾಣದ ಹುಚ್ಚರನ್ನು ಹುಟ್ಟುಕುರುಡರೆಂದೇ ಹೇಳಬೇಕು. ಮತ್ತು ಸ್ವತಂತ್ರವಾದ ವಸಾಹತುಗಳ ಜನರು ತಾವು ಮುಕ್ತರೆಂಬುದನ್ನೂ ತಮ್ಮ ಕಾಲ ಮೇಲೆಯೇ ತಾವು ನಿಲ್ಲಬೇಕಾಗಿದೆಯೆಂಬುದನ್ನೂ ತಿಳಿದುಕೊಳ್ಳದೆ ಹೋದರೆ ಭೃತರಾಷ್ಟ್ರ ಸಮಾನರೇ ಆಗುವರು.

[illegible] ಇಂಡೋನೇಶಿಯನ್ನರು ಪೂರ್ವಾವಶೇಷಗಳ ವಿರುದ್ಧ ಯುದ್ಧ ಮಾಡುತ್ತಿದ್ದಾರೆ. ಹಿಂದೀಯರು ಭವಿಷ್ಯವನ್ನು ಎದುರಿಸುತ್ತಿದ್ದಾರೆ. ರಾಷ್ಟ್ರೀಯ ಧೋರಣ ರಚನೆಯಲ್ಲಿ ಅದು ಆಕಾಶ ಪಾತಾಳಗಳಷ್ಟು ವ್ಯತ್ಯಾಸವನ್ನು ತರುತ್ತದೆ.

---

## ನಿಮಗಿದು ಗೊತ್ತೆ ?

● ಯುದ್ಧಪೂರ್ವದಲ್ಲಿ ಜಗತ್ತು ೩೪೦ ಕೋಟಿ ರತ್ತಲುಗಳಷ್ಟು ಉಣ್ಣೆಯನ್ನು ಪ್ರತಿದಿನ ಬಳಸುತ್ತಿತ್ತು.

● ಮೊಟ್ಟಮೊದಲನೆಯ ಬ್ರಿಟಿಶ ಆಕಾಶವಾಣಿಯ ಭಾಷಣ ೨೫ ವರುಷಗಳ ಹಿಂದೆ ೧೯೨೨ ನೆಯ ಫೆಬ್ರುವರಿ ೧೪ ರಲ್ಲಿ ನಡೆಯಿತು.



ಗಾಂಧಿಜಿಯ ಭಾವಚಿತ್ರದ ಉದ್ಘಾಟನ ಮಾಡುತ್ತ ಅಧ್ಯಕ್ಷ ಡಾ. ರಾಜೇಂದ್ರ ಪ್ರಸಾದರು ಭಾಷಣ ಮಾಡುತಿರುವರು.



ಘಟನಾ ಸಮಿತಿಯ ಭವನದಲ್ಲಿ ಮಹಾತ್ಮರ ಭಾವಚಿತ್ರ (ದಿ. ಸರ್ ಪ್ರಭಾಶಂಕರ ಪಟ್ಟಣಿ ಯವರ ಕಾಣಿಕೆ)

## ದಿವಂಗತ ಕೃಷ್ಣರಾಯರು

ಕನ್ನಡನಾಡಿನ ಕಡುಗಲಿಯಾಗಿದ್ದ ಶ್ರೀ ಮುದವೀಡು ಕೃಷ್ಣರಾಯರು ಇದೇ ೭ನೇ ತಾರೀಕು ರಾತ್ರಿ ವೈಕುಂಠವಾಸಿಗಳಾದರೆಂದು ತಿಳಿಸಲು ಅತ್ಯಂತ ವಿಷಾದವಾಗುತ್ತದೆ. ಮರಣ ಸಮಯಕ್ಕೆ ಅವರಿಗೆ ೭೫ ವರ್ಷಗಳಾಗಿದ್ದರೂ ಇಷ್ಟು ಬೇಗ ಅವರು ನಿಧನ ಹೊಂದುವರೆಂದು ಯಾರ ಕನಸುಮನಸಿನಲ್ಲಿಯೂ ಇರಲಿಲ್ಲ. ಏಕೆಂದರೆ ಮೊನ್ನೆಮೊನ್ನೆಯವರೆಗೆ ಅವರ ಸಿಂಹಾನಾದವನ್ನು ಕೇಳುವ ಭಾಗ್ಯವು ಕನ್ನಡಿಗರಿಗೆ ವಿಶೇಷತಃ ಧಾರವಾಡ, ಹುಬ್ಬಳ್ಳಿಯವರಿಗೆ ಲಭಿಸಿತ್ತು. ಶ್ರೀ ಮುದವೀಡುರವರು ಕರ್ನಾಟಕದ ಹಿರಿಯ ಧುರೀಣರಲ್ಲಿ ಒಬ್ಬರು. ಅಖಂಡ ೫೦-೬೦ ವರುಷಗಳಿಂದ ಕನ್ನಡನಾಡನ್ನು ಕಟ್ಟಲು ವಿವಿಧ ರೀತಿಯಿಂದ ಹೆಣಗಿದವರು. ಅದಕ್ಕಾಗಿ ಬಗೆಬಗೆಯ ಕಷ್ಟನಷ್ಟಗಳನ್ನು ಸಹಿಸಿದವರು. ಸ್ವಾರ್ಥತ್ಯಾಗ ಮಾಡಿದವರು ಕುರಂಗವಾಸವನ್ನನುಭವಿಸಿದವರು. ಭಾರತದ ಬಂಧವಿಮೋಚನೆಗಾಗಿ ಸರ್ವಾರ್ಪಣ ಮಾಡುವದೆಷ್ಟು ಅವಶ್ಯವೊ ಅಷ್ಟೆ ಕನ್ನಡ ನಾಡನ್ನು ಕಟ್ಟುವದಕ್ಕಾಗಿ ಸ್ವಾರ್ಥತ್ಯಾಗ ಮಾಡುವದು ಅವಶ್ಯವೆಂದು ಭಾವಿಸುವವರಲ್ಲಿ ಒಬ್ಬರು. ಅಂತೆಯೆ ತರುಣರಿದ್ದಾಗಿನಿಂದಲೆ ಕೃಷ್ಣರಾಯರು ಸಾರ್ವಜನಿಕ ಕಾರ್ಯದಲ್ಲಿಬಿದ್ದು ಕೊನೆಯವರೆಗೆ ಅದರಲ್ಲಿಯೆ ತಮ್ಮ ದೇಹವನ್ನು ಸವೆಸಿದವರು ಕರ್ನಾಟಕವೃತ್ತ ಮತ್ತು ಧನಜಂಯ ವೃತ್ತಪತ್ರಿಕೆಯನ್ನು ತೆಗೆದು ಕನ್ನಡಿಗರಲ್ಲಿ ತಮ್ಮ ಚುರುಕಾದ ಲೇಖನ ಶೈಲಿಯಿಂದ ಜಾಗ್ರತೆಯನ್ನುಂಟುಮಾಡಿದರು. ಬೆಳಗಾವಿಯ ಕನ್ನಡಿಗರು ಮರಾಠಿಯ ಮೋಹಜಾಲದಲ್ಲಿ ಸಿಕ್ಕು ನರಳುತಿರುವದನ್ನು ಕಂಡು ಮರುಗಿ ಬೆಳಗಾವಿ ಕಾಂಗ್ರೆಸ್ಸಿನ ಕಾಲಕ್ಕೆ ತಮ್ಮ ಪತ್ರಿಕೆಯನ್ನೇ ಅಲ್ಲಿಗೆ ಸ್ಥಳಾಂತರಿಸಿ ಹಾನಿಯನ್ನು ಸಹಿಸಿಯೂ ಅಲ್ಲಿನ ಕನ್ನಡಿಗರಲ್ಲಿ ಕನ್ನಡತನದ ಜಾಗ್ರತೆಯನ್ನು ಮಾಡಿದರು. ಪ್ರಸಿದ್ಧವಾಗ್ಮಿಗಳಾಗಿದ್ದದರಿಂದಇಡೀನಾಡಿನಲ್ಲಿಸಂಚರಿಸಿ ತಮ್ಮ ಸಿಂಹನಾದದಿಂದ ನಾಡಿಗರನ್ನೆಲ್ಲ ಎಚ್ಚರಿಸಿದರು. ವಾಗ್ಮಿಗಳಂತೆ ಅವರು ಪ್ರಸಿದ್ಧ ನಟರೂ ಆಗಿದ್ದರಿಂದ ಅನೇಕ ನಾಟಕಗಳಲ್ಲಿ ಸ್ವತಃ ಪಾತ್ರವಹಿಸಿ ರಂಗಭೂಮಿಯ ಸೇವೆಯನ್ನು ಮಾಡಿದರು. ಬಾಗಲಕೋಟೆಯಲ್ಲಿಸ್ಥಾಪಿತವಾಗಿರುವ ವಾಸುದೇವ ವಿನೋದಿನಿ ನಾಟಕ ಸಭೆಯವರೆಗೆ ಆದ್ಯಗುರುಗಳಾಗಿದ್ದರು ಸ್ವತಃ ನಾಟಕ ಕರ್ತರೂ ಆಗಿದ್ದರು. ಕನ್ನಡ ಸಾಹಿತ್ಯದಲ್ಲಿ ಇವರಿಗೆ ಒಳ್ಳೆ ಆಸ್ಥೆ. ಜೈಮಿನೀ ಭಾರತ ಕುಮಾರವ್ಯಾಸ ಭಾರತ ಇವರಿಗೆ ಕರತಲಾಮಲಕವಾಗಿದ್ದವೆಂದು ಹೇಳಬಹುದು. ಒಳ್ಳೆ ಭಕ್ತಿಭರಿತರಾಗಿ ಕುಮಾರವ್ಯಾಸ ಭಾರತವನ್ನು ಇವರು ಹಾಡಹತ್ತಿದರೆಂದರೆ ಎಂಥ ಅರಸಿಕರಾದರೂ ತಲೆದೂಗಬಹುದಾಗಿತ್ತು ಕೇಳುವವರ ಕಿವಿಗಳಿಗೆ ಅದೊಂದು ರಸದೂಟವೇ ಆಗುತಿದ್ದಿತು. ಹೀಗೆ ವಿವಿಧ ರೀತಿಯಿಂದ ಕನ್ನಡ ಸಾಹಿತ್ಯ ಸೇವೆಯನ್ನು ಮಾಡಿದ್ದರಿಂದ ಕನ್ನಡ ನಾಡು ಸಾಹಿತ್ಯ ಸಮ್ಮೇಲನ ಮತ್ತು ನಾಟ್ಯ ಸಮ್ಮೇಲನಕ್ಕೆ ಇವರನ್ನು ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಿತು. ಭಾರತಭೂಮಿ ಸ್ವತಂತ್ರವಾದುದನ್ನು ನೋಡುವ ಸೌಭಾಗ್ಯಮಾತ್ರ ಇವರಿಗೆ ಲಭಿಸಿತು. ಆದರೆ ಇವರ ಎರಡನೆಯ ಹಿರಿಯಾಸೆ, ಕನ್ನಡನಾಡು ಸ್ವತಂತ್ರವಾಗುವ ದಿನ್ನೂ ಕೈಗೂಡುವ ಮೊದಲೆ ಕರಾಳಕಾಲನು ಇವರನ್ನು ಎತ್ತಿಕೊಂಡು ಹೋದುದು ಅತ್ಯಂತ ಶೋಚನೀಯ ವಾಗಿದೆ. ಈ ಹಿರಿಯಾಸೆಕೈಗೂಡುವವರೆಗೆದಿವಂಗತರ ಆತ್ಮಕ್ಕೆ ತೃಪ್ತಿಯುಂಟಾಗದು. ಜಗಚ್ಚಾಲಕನು ಆ ಸುದಿನವನ್ನ ಬೇಗ ಒದಗಿಸಿ ತಂದು ಶ್ರೀ ಕೃಷ್ಣರಾಯರ ಆತ್ಮಕ್ಕೆ ಶಾಂತಿಯನ್ನೀಯಲೆಂದು ಪ್ರಾರ್ಥಿಸುತ್ತೇವೆ.

# ಸಂಪಾದಕೀಯ ಟೀಕೆಟಿಪ್ಪಣಿಗಳು

## ಮೈಸೂರು ರೇಲ್ವೆ ಸತ್ಯಾಗ್ರಹ

ಮೈಸೂರು ರೇಲ್ವೆಯಲ್ಲಿಯ ಹನ್ನೊಂದು ಸಾವಿರ ಕೆಲಸಗಾರರು ಇದೇ ೬ನೇ ತಾರೀಕು ಮಧ್ಯರಾತ್ರಿಯಿಂದ ಸಂಪು ಹೂಡಿರುವರು. ಪ್ರತಿಯೊಬ್ಬ ಕೆಲಸಗಾರನಿಗೆ ಒಂದು ಸಾವಿರ ರೂಪಾಯಿ ಬೋನಸ್ಸು ಕೊಡಬೇಕು ಮತ್ತು ಸಂಬಳದ ಪ್ರಮಾಣವನ್ನು ಪುನರ್ವಿಮರ್ಶಿಸಿ ಅದನ್ನು ಹೆಚ್ಚಿಗಿಸಬೇಕೆಂಬುದೆ ಕೆಲಸಗಾರರ ಮುಖ್ಯ ಬೇಡಿಕೆಯೆಂದು ಹೇಳಬಹುದು. ಕೆಲಸಗಾರರೆಲ್ಲ ಸಂಪು ಹೂಡಿದ್ದರಿಂದ, ಸಂಸ್ಥಾನದಲ್ಲಿಯ ರೇಲು ಸಾರಿಗೆಯೆಲ್ಲ ನಿಂತುಹೋಗಿದೆ. ಅಧಿಕಾರಿಗಳು ಗಾಡಿ ನಡೆಸುವ ಪ್ರಯತ್ನವನ್ನು ಕೆಲಸಗಾರರು ನಿಷ್ಫಲಗೊಳಿಸುತ್ತಿರುವರು. ಕೆಲಸಗಾರರ ಬೇಡಿಕೆಗಳ ಸಂಬಂಧದಲ್ಲಿ ಮೈಸೂರು ಸರಕಾರದವರು ಪ್ರಕಟನೆಯನ್ನು ಹೊರಡಿಸಿ ಹೊಸಸಂಬಳ ಪ್ರಮಾಣಗಳನ್ನು ಗೊತ್ತುಪಡಿಸುವೆವು ಈ ಸಂಬಳ ಪ್ರಮಾಣ ಜನವರಿ ೧೯೪೭ ರಿಂದಲೆ ಜಾರಿಯಲ್ಲಿ ಬರುವದಾಗಿ ಸಾರಿದ್ದಾರೆ. ಈ ಹೊಸ ಸಂಬಳ ಪ್ರಮಾಣದಿಂದ ಸಂಸ್ಥಾನದ ರೇಲ್ವೆ ಕೆಲಸಗಾರರ ಸಂಬಳದ ಬಗ್ಗೆಯೆ ೧೫|| ಲಕ್ಷ ರೂಪಾಯಿ ಹೆಚ್ಚು ವೆಚ್ಚ ಬರುವದೆಂದು ತೋರಿಸಿದ್ದಾರೆ. ರೇಲ್ವೆ ಕೆಲಸಗಾರರು ಕೇಳಿದ ಬೋನಸ್ಸು ಮತ್ತು ಹೆಚ್ಚಿನ ಸಂಬಳವನ್ನು ಕೊಟ್ಟದ್ದಾದರೆ ಪ್ರತಿವರ್ಷ ೧||ಕೋಟಿ ರೂಪಾಯಿಗಳಷ್ಟು ಹೆಚ್ಚು ವೆಚ್ಚ ಸರಕಾರಕ್ಕೆ ಬರುವದೆಂದು ಪ್ರಕಟಿಸಲಾಗಿದೆ. ರೇಲ್ವೆಯ ಉತ್ಪನ್ನ ೧೭೭ಲಕ್ಷವಿದ್ದು ಹೊಸ ಪ್ರಮಾಣದಂತೆ ಸಂಬಳ ಮತ್ತು ಬೋನಸ್ಸು ಕೂಡಿ ೧೭೪ ಲಕ್ಷ ರೂಪಾಯಿ ವೆಚ್ಚವಾಗುವದು. ಇದರಿಂದ ಸರಕಾರಕ್ಕೆ ಕೇವಲ ೩ ಲಕ್ಷರೂಪಾಯಿ ಉಳಿತಾಯವಾಗುವದೆಂದೂ ಸರಕಾರದ ಪ್ರಕಟನೆ. ಈ ರೀತಿ ಪ್ರಕಟನೆಯನ್ನು ಹೊರಡಿಸಿ ಸರಕಾರದವರು ಕೆಲಸಗಾರರಬೇಡಿಕೆಗಳನ್ನು ಪೂರಯಿಸಲಿಲ್ಲಾದ್ದರಿಂದ ಸಂಪು ಸಾಗಿದೆ. ಆಹಾರ ಬಟ್ಟೆ ಮೊದಲಾದ ನಿತ್ಯಾವಶ್ಯಕ ಪದಾರ್ಥಗಳ ಸಾರಿಗೆಗೂ ಇದರಿಂದ ವ್ಯತ್ಯಯವುಂಟಾಗಿದೆ. ರೇಲ್ವೆ ಕೆಲಸಗಾರರ ಪರಿಸ್ಥಿತಿಯು ನಿಕೃಷ್ಟವಾಗಿದೆಂದು ಬೇರೆ ಹೇಳಲಿಕ್ಕೆ ಬೇಡ. ಈ ಪರಿಸ್ಥಿತಿಯಲ್ಲಿ ಹಿಂದುಸ್ತಾನ ಸರಕಾರದವರು ಕೈಹಾಕಿ ಸಂಪನ್ನು ನಿಲ್ಲಿಸುವದು ಅತ್ಯವಶ್ಯವಾಗಿದೆ. ಮೈಸೂರ ರೇಲ್ವೆ ಕೆಲಸಗಾರರ ಸಂಘದ ಅಧ್ಯಕ್ಷರು ಹಿಂದುಸ್ತಾನ ಸರಕಾರದ ಗೃಹಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರಿಗೆ ದಿಲ್ಲಿಯಲ್ಲಿರುವ ರೇಲ್ವೆ ಕೆಲಸಗಾರ ಮಹಾಮಂಡಲದ ಕಾರ್ಯದರ್ಶಿಗಳಾದ ಶ್ರೀ ಗುರುಸ್ವಾಮಿಯರರಿಗೆ ತಂತಿಯನ್ನು ಕಳಿಸಿ 'ಸಂಪಿನ ಮೂಲಕ ಮೈಸೂರ ರೇಲ್ವೆ ವ್ಯವಹಾರ ಪೂರ್ಣ ಕಟ್ಟಾಗಿದೆ. ಹಿಂದುಸ್ತಾನದ ಮುಖ್ಯ ರೇಲು ಮಾರ್ಗಗಳು ವಿಚ್ಛೇದಿಸಲ್ಪಟ್ಟವೆ. ರೇಲ್ವೆ ಸಾರಿಗೆಯು ಹಿಂದುಸ್ತಾನ ಸರಕಾರದ ವಿಷಯವಾದ್ದರಿಂದ ಅವರು ಕೂಡಲೆ ಕೈಹಾಕಿ ರೇಲ್ವೆ ಆಡಳಿತೆಯನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳಬೇಕು, ಇದಕ್ಕೆ ರೇಲ್ವೆ ಕೆಲಸಗಾರರ ಒಪ್ಪಿಗೆ ಇದೆ, ನಮ್ಮ ಕೈಬಿಡಬೇಡಿರೆಂದು, ಮುಂತಾಗಿ ಮೊರೆ ಇಟ್ಟದ್ದಾರೆ. ಅವರ ಮೊರೆಯನ್ನು ಕೇಳಿಯಾದರೂ ಹಿಂದುಸ್ತಾನ ಸರಕಾರದವರು ಕೂಡಲೆ ಮಧ್ಯಸ್ಥಿಕೆಯನ್ನು ವಹಿಸಿ ಈ ಸಂಪನ್ನು ನಿಲ್ಲಿಸಬೇಕಾದುದು ಅವಶ್ಯವಾಗಿದೆ. ಮೈಸೂರ ರೇಲ್ವೆ ಕೆಲಸಗಾರ ಸಂಘದವರು ಸಂಪು ಪ್ರಾರಂಭಮಾಡಿದ ಎರಡು ದಿನಗಳನಂತರ ಸರದಾರ ಪಟೇಲರಿಗೆ ಬಿನ್ನವಿಸುವದರ ಬದಲು ಮೊದಲೆ ತಮ್ಮ ಬೇಡಿಕೆಗಳನ್ನೆಲ್ಲ ಸರದಾರ ಪಟೇಲರಿಗೆ ತಿಳಿಸಿ ಮಧ್ಯಸ್ಥಿಕೆಗಾಗಿ ಕೇಳಿಕೊಂಡಿದ್ದರೆ ಮತ್ತು ಅದಕ್ಕಾಗಿ ಕೆಲದಿನದಾರಿ ಕಾಯ್ದಿದ್ದರೆ ಹೆಚ್ಚು ಒಳಿತಾಗುತ್ತಿತ್ತು. ಆದದ್ದಾಗಿ ಹೋಯಿತು ಈಗಾದರೂ ಸರದಾರ ಪಟೇಲರ ಮಧ್ಯಸ್ಥಿಕೆಗೆ ಒಪ್ಪಿ ರೇಲ್ವೆ ಕೆಲಸಗಾರ ಸಂಘದವರು ಮುನ್ನಡೆ ಇಡಬೇಕೆಂದು ಸೂಚಿಸುತ್ತೇವೆ.

## ಸಕಾಲಿಕ ಎಚ್ಚರಿಕೆ

ಕಾಂಗ್ರೆಸ್ಸಿನ ಅಧ್ಯಕ್ಷರಾದ ಆಚಾರ್ಯ ಕೃಪಲಾನಿಯವರು ಪ್ರಕಟನೆಯೊಂದನ್ನು ಹೊರಡಿಸಿ ಕಾಂಗ್ರೆಸ ಸಮಿತಿಗಳು ಮತ್ತು ಮಂತ್ರಿಮಂಡಳಗಳಲ್ಲಿರಬೇಕಾದ ಸಂಬಂಧವನ್ನು ಮತ್ತೊಮ್ಮೆ ಸ್ಪಷ್ಟೀಕರಿಸಿರುವರು. ಮಿದನಾಪೂರ ಜಿಲ್ಹೆಯ ಕೆಲವು ಕಾಂಗ್ರೆಸ್ ಧುರೀಣರು ಒಂದು ಸಭೆಯಲ್ಲಿ ಪಶ್ಚಿಮ ಬಂಗಾಲದ ಮಂತ್ರಿ ಮಂಡಲದಲ್ಲಿ ಬದಲಾವಣೆ ಮಾಡಕೂಡದೆಂದೂ ಮಾಡಿದ್ದಾದರೆ ಮಿದನಾಪುರ ಜಿಲ್ಹೆಯಂದ ಆರಿಸಿ ಹೋದ ಯಾವದೆ ಸದಸ್ಯನು ಮಂತ್ರಿ ಮಂಡಲದಲ್ಲಿ ಯಾವದೇ ಸ್ಥಳವನ್ನು ಸ್ವೀಕರಿಸಕೂಡದೆಂದೂ ಗೊತ್ತುವಳಿ ಮಾಡಿದ್ದನ್ನನುಲಕ್ಷಿಸಿ ರಾಷ್ಟ್ರಪತಿಗಳು ಈ ಘೋಷಣೆಯನ್ನು ಹೊರಡಿಸಿದ್ದಾರೆ. ಮಂತ್ರಿಮಂಡಳದ ಸಂಯುಕ್ತ ಹೊಣೆಗಾರಿಕೆಯ ಮತ್ತು ಒಕ್ಕೂಟದ ತತ್ವವನ್ನು ಕಾಂಗ್ರೆಸ್ಸು ಒಪ್ಪಿಕೊಂಡಿದ್ದರಿಂದಲೆ ಪ್ರಾಂತಿಕ ಕಾಂಗ್ರೆಸ ಸಮಿತಿಗಳು ಪ್ರಾಂತಿಕ ಮಂತ್ರಿ ಮಂಡಳಗಳ ಆಡಳಿತೆಯಲ್ಲಿ ಕೈಹಾಕಲು ಅವಕಾಶ ಕೊಟ್ಟಿರುವದಿಲ್ಲ. ಆದುದರಿಂದ ಕಾಂಗ್ರೆಸಕಾರ್ಯಕರ್ತರ ಒಂದು ಗುಂಪು ಅದು ಎಷ್ಟೇ ದೊಡ್ಡ ಜನರಿಂದ ಕೂಡಿದ ಗುಂಪಾಗಿದ್ದರೂ ಮಂತ್ರಿ ಮಂಡಲದಲ್ಲಿ ಇಂಥವರೇ ಇರಬೇಕೆಂದು ಹೇಳುವಂತಹ ಇಲ್ಲವೆ ಮಂತ್ರಿಗಳ ದೈನಂದಿನ ಆಡಳಿತ ಈ ರೀತಿಯಾಗಿಯೇ ಸಾಗತಕ್ಕದ್ದು ಎಂದು ಸೂಚಿಸುವ ಗೊತ್ತುವಳಿ ಮಾಡುವದು ತಪ್ಪು ಎಂದು ಆಚಾರ್ಯ ಕೃಪಲಾನಿಯವರು ಅಧಿಕಾರವಾಣಿಯಿಂದ ಎಲ್ಲರಿಗೂ ಎಚ್ಚರಿಕೆ ಕೊಟ್ಟಿರುವರು. ಸರಕಾರದ ದೈನಂದಿನ ಚಟುವಟಿಕೆಗಳಲ್ಲಿ ಇಲ್ಲವೆ ಅಧಿಕಾರಿಗಳು ದೈನಿಕ ಕಾರ್ಯಗಳಲ್ಲಿ ಕಾಂಗ್ರೆಸ್ ಕಾರ್ಯಕರ್ತರು ಕೈಹಾಕುತ್ತ ಹೋದರೆ ಆಡಳಿತದಲ್ಲಿ ಶೈಥಿಲ್ಯವುಂಟಾಗುವುದೆಂಬಲ್ಲಿ ಸಂದೇಹವಿಲ್ಲ. ಕಾಂಗ್ರೆಸ್ ಸಮಿತಿಗಳು ಜನತೆಗೆ ಹಿತಕರವಾದ ಯೋಜನೆಗಳನ್ನು ಕೈಕೊಳ್ಳುವ ಬಗ್ಗೆ ಸರಕಾರಕ್ಕೆ ಸಲಹೆ ಸೂಚನೆಗಳನ್ನು ಕೊಡಬಹುದು. ಅವುಗಳನ್ನೆಲ್ಲ ಸರಕಾರದವರು ವಿಮರ್ಶಿಸಿ ಸೂಕ್ತವಾದವುಗಳನ್ನು ಕೈಕೊಳ್ಳಬಹುದು. ಆದರೆ ತಮ್ಮಿಂದಲೆ ಮಂತ್ರಿಮಂಡಳಗಳು ರಚಿತವಾಗಿವೆ ಮಂತ್ರಿಗಳು ತಮ್ಮ ಸೇವಕರು ಎಂದುಮುಂತಾಗಿ ತಿಳಿದುಕೊಂಡು ಕಾಂಗ್ರೆಸ ಕಾರ್ಯಕರ್ತರು ಆಡಳಿತದಲ್ಲಿ ಕೈಹಾಕುವ ಧೋರಣ ವಹಿಸಿದರೆ ಎಲ್ಲೆಲ್ಲಿಯೂ ಶೈಥಿಲ್ಯವುಂಟಾಗಿ ಅರಾಜಕತೆಗೆಳೆನಿಸಬಹುದು. ಸದ್ಯದಲ್ಲಿ ಈ ಬಗೆಯ ಕೈವಾಡ ನಡೆಸುತಿರುವದು ಅಲ್ಲಲ್ಲಿ ಕಾಣಬರುತಿರುವದರಿಂದ ಅಧ್ಯಕ್ಷರು ಹೊರಡಿಸಿದ ಪ್ರಕಟನೆ ಸಕಾಲಿಕವಾಗಿದೆಂದು ಹೇಳಬೇಕಾಗಿದೆ. ಇನ್ನು ಮುಂದಾದರೂ ಕಾಂಗ್ರೆಸ ಕಾರ್ಯಕರ್ತರು ತಮ್ಮ ಕರ್ತವ್ಯದ ಪರಿಮಿತಿಯನ್ನು ತಿಳಿದುಕೊಂಡು ನಡೆಯಬೇಕೆಂದು ಸೂಚಿಸ ಬಯಸುತ್ತೇವೆ.

## ಬಡತನದ ನಾಶವೇ ಧ್ಯೇಯ

ನೂರಾರು ವರುಷಗಳ ಪರಕೀಯರ ಆಳಿಕೆಯಿಂದ ಹಿಂದುಸ್ತಾನ ಅತ್ಯಂತ ದರಿದ್ರವಾಗಿಬಿಟ್ಟಿದೆ. ಎಲ್ಲ ವಿಷಯಗಳಲ್ಲಿಯೂ ಪರದೇಶಗಳನ್ನೆ ಅವಲಂಬಿಸುವ ಪರಿಸ್ಥಿತಿ ಬಂದದ್ದರಿಂದ ಇಲ್ಲಿನ ಹೊನ್ನಿನ ಹೊಳೆಯೆಲ್ಲ ಹರಿದುಹೋಗಿದೆ. ಉತ್ಪಾದನ ಶಕ್ತಿಯೂ ಕುಂಠಿತವಾಗಿದೆ. ಒಂದುಕಾಲಕ್ಕೆ ಸ್ವಾವಲಂಬಿಯಾಗಿದ್ದ ಭಾರತವಿಂದು ಅನ್ನ ಬಟ್ಟೆಗಳಿಗೆ ಕೂಡ ಪರಾವಲಂಬಿಯಾಗಿ ಕಂಗೆಟ್ಟಿದೆ. ಇದೀಗ ಅಧಿಕಾರಗ್ರಹಣ ಮಾಡಿದ ಸ್ವತಂತ್ರ ಹಿಂದುಸ್ತಾನ ಸರಕಾರದವರು ಈ ಪರಿಸ್ಥಿತಿಯನ್ನು ಸರಿಪಡಿಸಲು ಬದ್ಧಪ್ರತಿಜ್ಞರಾಗಿದ್ದಾರೆ. ಶ್ರೀಮಂತರನ್ನು ಸುಲಿಯುವದಾಗಲಿ ಯಾವದೇ ವರ್ಗವನ್ನು ಅಳಿಯುವದಾಗಲಿ ಹಿಂದುಸ್ತಾನ ಸರಕಾರದ ಆಶಯವಾಗಿರದೆ ಬಡತನವನ್ನು ನಾಶಮಾಡುವದೆ ತಮ್ಮ ಗುರಿಯಾಗಿದೆಯೆಂದು ಸ್ವತಂತ್ರ ಹಿಂದುಸ್ತಾನ ಸರಕಾರದ ಅರ್ಥ ಸಚಿವರಾದ ಶ್ರೀ ಆರ್ ಕೆ ಷಣ್ಮುಖಂ ಚೆಟ್ಟಿಯವರು ಮದ್ರಾಸಿನ ಒಂದು ಸಭೆಯಲ್ಲಿ ಮಾತಾಡುತ್ತ ಅಪ್ಪಣೆ ಕೊಡಿಸಿದರು. ವಿಪರೀತ ಏರಿದ ಧಾರಣೆಗಳನ್ನೆಲ್ಲ ಜನತೆಯ ಅಳವಿನಲ್ಲಿ ಬರುವ ಮಟ್ಟಕ್ಕೆ ಇಳಿಸುವದು ಸ್ವತಂತ್ರ ಹಿಂದುಸ್ತಾನ ಸರಕಾರದ ಅರ್ಥಸಚಿವನಾದ ನನ್ನ ಮೊದಲನೆಯ ಕೆಲಸ. ಇದರಲ್ಲಿ ಜನತೆಯ ಹಾರ್ದಿಕ ಸಹಾಯ ಸಹಕಾರ ಅತ್ಯವಶ್ಯವಾಗಿದೆಯೆಂದೂ ಅವರು ಹೇಳಿದರು. ಬಂಡವಾಳಗಾರರು ಮತ್ತು ಕೂಲಿಕಾರರಲ್ಲಿ ಯೋಗ್ಯ ಸಹಕಾರವುಂಟಾದರೆ ಉತ್ಪಾದನ ಬಹಳ ಮಟ್ಟಿಗೆ ಹೆಚ್ಚುವುದೆಂದು ನನಗ ಮನವರಿಕೆಯಾಗಿದೆಯೆಂದೂ ಅವರು ಹೇಳಿದರು. ಜನಸಾಮಾನ್ಯಕ್ಕೆ ಸಾಕಷ್ಟು ಅನ್ನ ಬಟ್ಟೆ ಮತ್ತು ಆಶ್ರಯ ಇವುಗಳನ್ನು ದೊರಕಿಸಿಕೊಡುವದೆ ಸರ್ಕಾರದ ಮುಂದಿರುವ ಅತ್ಯಂತ ಮಹತ್ವದ ಸಮಸ್ಯೆಯಾಗಿದೆ. ಇದು ಸಾಧ್ಯವಾಗಬೇಕಾದರೆ ಎಲ್ಲ ಉತ್ಸಾಹ ಶಕ್ತಿಗಳನ್ನು ಉತ್ಪಾದನವನ್ನು ಹೆಚ್ಚಿಸುವಲ್ಲಿಯೆ ವ್ಯಯಮಾಡತಕ್ಕದ್ದು ಅವಶ್ಯವಾಗಿದೆ ಎಂದೂ ಅರ್ಥಸಚಿವರು ಹೇಳಿದರು. ಅವರ ಈ ಮಾತುಗಳು ಯಥಾರ್ಥವಾಗಿದ್ದು ಎಲ್ಲರೂ ಇವನ್ನು ಕಾರ್ಯರೂಪದಲ್ಲಿತರಲು ಸರಕಾರಕ್ಕೆ ಸಹಾಯ ಸಲ್ಲಿಸುವದವಶ್ಯವಾಗಿದೆ. ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳದಿದ್ದರೆ ದೇಶವು ಪರಾವಲಂಬಿಯಾಗುವದು. ಅದರಿಂದ ಬಡತನ ಹೆಚ್ಚುವದು. ಜನತೆ ಕಂಗಾಲಾಗುವದು. ಇದನ್ನೆಲ್ಲ ಹೋಗಲಾಡಿಸುವದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ. ಹಿಂದುಸ್ತಾನದಲ್ಲಿ ಬ್ರಿಟಿಶರು ಬರುವ ಮೊದಲು ಒಕ್ಕಲತನ ಮತ್ತು ಕೈಗಾರಿಕೆಗಳು ಸುಸ್ಥಿತಿಯಲ್ಲಿದ್ದು ಜನತೆಯ ಸಂಪದಭಿವೃದ್ಧಿಗೆ ಒಳ್ಳೆ ಸಹಾಯಕವಾಗಿದ್ದವು. ಆದರೆ ಬ್ರಿಟಿಶರು ತಮ್ಮ ಸರಕುಗಳಿಗೆ ಪೇಟೆಯನ್ನು ಕಲ್ಪಿಸಿ ಕೊಡುವುದಕ್ಕಾಗಿ ಇಲ್ಲಿನ ಒಂದೊಂದೇ ಕೈಗಾರಿಕೆಗಳನ್ನು ಅಳಿದು ಬಿಟ್ಟರು. ಇದರಿಂದ ಉತ್ಪಾದನೆಯು ಕುಗ್ಗಿ ಜನ ಕಂಗಾಲಾಯಿತು. ಇದನ್ನು ಹೋಗಲಾಡಿಸಬೇಕಾದರೆ ಸರಕಾರದವರು ಕೈಕೊಳ್ಳುವ ಯೋಜನೆಗಳಲ್ಲಿ ಎಲ್ಲ ವರ್ಗದವರೂ ಹಾರ್ದಿಕ ಸಹಾಯವನ್ನಿತ್ತು ಉದ್ದೇಶ್ಯವನ್ನು ಸಾಧಿಸಿಕೊಳ್ಳಬೇಕೆಂದು ಕೇಳಿಕೊಳ್ಳುತ್ತೇವೆ.

### ರಮಾನಂದರು ಉಪವಾಸ ನಿಲ್ಲಿಸಿದರು

ಹೈದರಾಬಾದ ಸಂಸ್ಥಾನ ಕಾಂಗ್ರೆಸ್ ಅಧ್ಯಕ್ಷ ಸ್ವಾಮಿ ರಮಾನಂದತೀರ್ಥರು ಅನ್ನ ಸತ್ಯಾಗ್ರಹ ನಿಲ್ಲಿಸಲು ನಿಜಾಮ ಸರಕಾರದ ಕಾಯದೆ ಮಂತ್ರಿಗಳು ಮತ್ತು ಪೋಲೀಸ ಡೈರೆಕ್ಟರ ಜನರಲ್ಲರು ಜೈಲಿನಲ್ಲಿ ಅವರನ್ನು ಕಂಡು ಸರಕಾರ ರಾಜಕೀಯ ಕೈದಿಗಳ ಬೇಡಿಕೆಗಳನ್ನು ಒಪ್ಪಿದೆಯೆಂದು ತಿಳಿಸಿದ್ದು ಕಾರಣವಾಯಿತೆಂದು ತಿಳಿದುಬಂದಿದೆ.

# ದಿಲ್ಲಿಯಲ್ಲಿ ಪಾಶವೀ ಶಕ್ತಿಯ ಪೈಶಾಚಿಕ ನರ್ತನ

## ಯುದ್ಧ ಪರಿಸ್ಥಿತಿಯೇ ಉಂಟಾಗಿದೆಂದು ಜವಾಹರರ ಹೇಳಿಕೆ

## ಉಗ್ರೋಪಾಯಗಳಿಂದ ಗಲಭೆಗಳನ್ನು ಹತ್ತಿಕ್ಕುವ ನಿರ್ಧಾರ

### ಗಲಭೆ ಗಂಡಾಂತರಗಳು

ದೇಶದ ನಾನಾ ಭಾಗಗಳಲ್ಲಿ ದಂಗೆ, ದಾಳಿ, ಗಲಭೆ, ಗಂಡಾಂತರಗಳು ನಡೆಯುತ್ತಿವೆ. ರಾಜಕೀಯ, ಜಾತೀಯ ಹಾಗೂ ದುಷ್ಕೃತ್ಯಕಾರ ಶಕ್ತಿಗಳಿಂದ ಕುಂದಕನದಿಂದು ಗಂಡಾಂತರವೆಂದು ತಿಳಿಯಲ್ಪಡುತ್ತಿದೆ. ಈ ಪರಿಸ್ಥಿತಿಯನ್ನು ಹಿಡಿತದಲ್ಲಿ ತರಲು ನಮ್ಮ ಅಧಿಕೃತ ಮುಖಂಡರು ಪೋಲೀಸು, ಸೈನ್ಯ, ಸ್ವಯಂಸೇವಕರು ಮೊದಲಾದ ಎಲ್ಲ ದಲಗಳನ್ನು ಬಳಸುತ್ತಿರುವರಲ್ಲದೆ ಜನತೆಯ ಸದ್ಬುದ್ಧಿಯನ್ನೆಚ್ಚರಿಸುವ, ಕರ್ತವ್ಯವನ್ನರುಹುವ, ಸಹಾಯ ಸಹಕಾರವನ್ನು ಬಯಸುವ ಹೇಳಿಕೆಗಳನ್ನು ಕೊಟ್ಟಿದ್ದಾರೆ.

### ದಿಲ್ಲಿಯಲ್ಲಿ ಇರಿತ ದುರಿತಗಳು ಹಾಗೂ ನಿರಾಶ್ರಿತರ ನೆರೆ

ಪಂಜಾಬದಲ್ಲಿಯ ಪರಿಸ್ಥಿತಿಯನ್ನು ವಿಚಾರ ಮಾಡಲು ಕೇಂದ್ರ ಸರಕಾರದ ಮಂತ್ರಿಮಂಡಳದ ವಿಶೇಷ ಸಭೆ ಕೂಡಿದಾಗ ಮುಖ್ಯ ಪ್ರಧಾನರಾದ ಪಂ. ಜವಾಹರರು ನಿರಾಶ್ರಿತರ ಪರಿಹಾರ ಹಾಗೂ ಪುನರ್ನಿಯೋಜನೆಯ ಬಗ್ಗೆ ಪ್ರತ್ಯೇಕ ಖಾತೆಯೊಂದನ್ನು ನಿರ್ಮಿಸಲು ಸರಕಾರವು ನಿರ್ಣಯಿಸಿದ್ದುದನ್ನು ತಿಳಿಸಿ ಶ್ರೀ ಕೆ. ಸಿ. ನಿಯೋಗಿಯವರಿಗೆ ಆ ಖಾತೆಯ ಮಂತ್ರಿಪದವನ್ನು ವಹಿಸಲಾಗುತ್ತದೆಂದು ಹೇಳಿದರು.

ಸದ್ಯದ ಪರಿಸ್ಥಿತಿಯನ್ನನುಲಕ್ಷಿಸಿ ಗವರ್ನರ ಜನರಲ್ ಹಾಗೂ ಅವರ ಪತ್ನಿಯವರು ಈಗ ಯಾವ ಸತ್ಕಾರ ಸಮಾರಂಭದಲ್ಲೂ ಭಾಗವಹಿಸದಿರಲು ಮತ್ತು ಸತ್ಕಾರ ಜರುಗಿಸದಿರಲು ನಿರ್ಣಯಿಸಿರುವರೆಂಬ ಸಂಗತಿಯಿಂದ ಪರಿಸ್ಥಿತಿಯೆಷ್ಟು ಉಗ್ರವಾಗಿದೆಯೆಂಬುದು ತಿಳಿಯುತ್ತದೆ. ದಿಲ್ಲಿಯ ಕರೋಲಬಾಗ ಫೈಜ ಬಜಾರ, ಜುಮ್ಮಾ ಮಸೀದೆ, ಲೋಧಿ ವಸತಿ ಮೊದಲಾದ ಭಾಗಗಳಲ್ಲಿ ಕೊಳ್ಳೆ, ಲೂಟಿ, ಇರಿತ ಮುಂತಾದ ದುರ್ಘಟನೆಗಳು ಸಂಭವಿಸಿದ್ದರಿಂದ ಪೋಲೀಸರು ಗುಂಡು ಹಾರಿಸಿ ಜನರನ್ನು ಚದುರಿಸಬೇಕಾಯಿತು. ಮುರಾದಾಬಾದಿಗೆ ಹೊರಟು ನಿಂತಿದ್ದ ಹೊಗೆಬಂಡಿಯಲ್ಲಿ ಬಾಂಬು ಸಿಡಿದು ೧೦ ಜನರು ಗಾಯಗೊಂಡರೆಂದು ಗೊತ್ತಾಗಿದೆ.

ಪಹಾಡಗಂಜ ಮುಂತಾದ ಕಡೆಗಳಲ್ಲಿ ಗಲಭೆ ಗಂಭೀರರೂಪತಾಳಿ ಅಲ್ಲಿ ಪೋಲೀಸರು ಹಾಗೂ ಪುಂಡರನಡುವೆ ಬಂಡೂಕುಗಳ ದ್ವಂದ್ವ ನಡೆಯಿತೆಂದು ಗೊತ್ತಾಗಿದೆ. ಚಾಂದನಿ ಚೌಕ ಪೇಟೆಯಲ್ಲಿ ೬೨ ಹೆಣಗಳು ಕಂಡವಂತೆ. ಇಂತಹ ದುಃಖಾಸ್ಪದ ಪರಿಸ್ಥಿತಿಯನ್ನು ಕಂಡು ಒಕ್ಕೂಟ ಸರಕಾರದ ಮಂತ್ರಿ ವರ್ಗವು ತಲ್ಲಣಿಸಿ ಹೋಗಿದೆ.

### ನಾಗರಿಕರಿಗೆ ಸರದಾರ ಪಟೇಲರ ಬಿನ್ನಹ

ಹಿಂದುಸ್ಥಾನ ಸರಕಾರದ ಗೃಹಮಂತ್ರಿಗಳಾದ ಸರದಾರ ವಲ್ಲಭಭಾಯಿ ಪಟೇಲರು ಕೆಳಗಿನ ಬಿನ್ನಹ ಹೊರಡಿಸಿದ್ದಾರೆ—

ಶಾಂತಿ ಸುವ್ಯವಸ್ಥೆಗೆ ಧಕ್ಕೆ ತಗಲುವಂಥ ಉಗ್ರ ಪರಿಸ್ಥಿತಿಯನ್ನು ದಿಲ್ಲಿ ಪಟ್ಟಣವೀಗ ಎದುರಿಸುತ್ತಿದೆ. ಜಾತೀಯ ಗಲಭೆಗಳ ವಿಚಾರ ಮಾಡುವ ವಿಷಯದಲ್ಲಿ ಪೋಲೀಸರೂ ಹಾಗೂ ಅಧಿಕಾರಿಗಳೂ ಮತ್ತು ನಾಗರಿಕರ ಆಡಳಿತೆಯ ಅಧಿಕಾರಿಗಳೂ ಒಂದು ನಿಷ್ಪಕ್ಷಪಾತದ ಹಾಗೂ ಕಾರ್ಯಕ್ಷಮತೆಯ ಆದರ್ಶವನ್ನು ಹಿಂದೆಯೇ ಹಾಕಿಕೊಟ್ಟಿದ್ದರು. ಅವರು ಹಾಕಿಕೊಟ್ಟ ಆ ಮಟ್ಟವನ್ನು ಕಾಯ್ದುಕೊಳ್ಳಲು ಹಾಗೂ ಶಕ್ಯವಿದ್ದರೆ ಅದನ್ನು ಸುಧಾರಿಸಲಿಕ್ಕೆ ನಾನು ಅವರ ಮೇಲೆಯೇ ವಿಶ್ವಾಸವಿಡುವೆ. ರಾಜಧಾನಿಯಲ್ಲಿ ಶಾಂತಿ-ಸಮಾಧಾನಗಳು ಪುನಃ ನೆಲೆಗೊಳ್ಳಲು ಶಕ್ತಿಮೀರಿ ಸಹಾಯ ಮಾಡಬೇಕೆಂದು ಪೋಲೀಸ ದಳದ ಹಾಗೂ ನಾಗರಿಕ ಆಡಳಿತದ ಪ್ರತಿಯೊಬ್ಬರಿಗೂ ನಾನು ಬಿನ್ನವಿಸಿಕೊಳ್ಳುತ್ತೇನೆ.

ತಮ್ಮ ಪ್ರಮಾಣ ಬುದ್ಧಿಯನ್ನು ದಿಲ್ಲಿಯ ನಾಗರಿಕರು ಕಳೆದುಕೊಳ್ಳಬಾರದೆಂದು ನಾನು ಕಳಕಳಿಯಿಂದ ಬಿನ್ನವಿಸಿಕೊಳ್ಳುತ್ತೇನೆ ಮತ್ತು ಅತೀವ ದುಃಖಕ್ಕೊಳಗಾದ ಪಂಜಾಬಕ್ಕೆ ಸಹಾನುಭೂತಿಯನ್ನು ತೋರಿಸುವ ಒಂದು ವಿಕಾರ ಭಾವನೆಗೊಳಗಾಗಬಾರದು. ದಿಲ್ಲಿಯ ಶಾಂತತೆಗೆ ಭಂಗತರಲು ಪ್ರಯತ್ನಿಸುವವರು ಪಂಜಾಬದ ನಾಗರಿಕರಿಗೆ ಎರಡು ಬಗೆದಂತಾಗುವದಲ್ಲದೇ ಹಿಂದುಸ್ಥಾನ ಸರಕಾರವನ್ನು ನಿರುತ್ಸಾಹಿಯನ್ನಾಗಿ ಮಾಡಿದಂತಾಗುವದು. ಸ್ವಯಂ ನಿಗ್ರಹವನ್ನು ತೋರಿಸಿ ನಿಜವಾದ ನಾಗರಿಕರಂತೆ ವರ್ತಿಸದಿದ್ದರೆ, ನೆರೆಯ ಪ್ರಾಂತಗಳಿಂದ ಇಲ್ಲಿಗೆ ಬರುತ್ತಿರುವ ನಿರಾಶ್ರಿತರಿಗೆ ದಿಲ್ಲಿಯ ನಾಗರಿಕರು ಸಲ್ಲಿಸುತ್ತಿರುವ ಆದರಾತಿಥ್ಯವು ವ್ಯರ್ಥವಾಗುವದು.

### ಪೋಲೀಸರಿಗೆ ಗುಂಡು ಹಾರಿಸುವ ಅಧಿಕಾರ

ಹಿಂದುಸ್ಥಾನ ಸರಕಾರದ ಮಂತ್ರಿಮಂಡಲದ ವಿಶೇಷ ಸಮಿತಿಯು ತಾ. ೭ರ ಮಧ್ಯಾಹ್ನ ೧೧ ಗಂಟೆಯಿಂದ ೨ ಗಂಟೆಯ ವರೆಗೆ, ಪುನಃ ಸಾಯಂಕಾಲ ೬ ರಿಂದ ೮ ಗಂಟೆಯ ವರೆಗೆ ಸಭೆ ಸೇರಿ ಪೂರ್ವ ಪಂಜಾಬದಲ್ಲಿಯ ಪರಿಸ್ಥಿತಿಯ ಬಗ್ಗೆ ಪೂರ್ವ ಪಂಜಾಬ ಗವ್ಹರ್ನರ, ಪೂರ್ವ ಪಂಜಾಬದ ಮುಖ್ಯ ಮಂತ್ರಿ ಹಾಗೂ ಗೃಹ ಮಂತ್ರಿಗಳು ಕೊಟ್ಟ ಹೇಳಿಕೆಗಳನ್ನು ಕೇಳಿಕೊಳ್ಳಲಾಯಿತು.

### ಜವಾಹರರ ಭಾಷಣ

"ಅವ್ಯಾಹತವಾಗಿ ಎಲ್ಲೆಡೆಗೂ ದಂಗೆ ತಾಗಿದರೆ ಭಾರತವನ್ನು ನಾವು ನಮ್ಮ ಮಕ್ಕಳಿಗೆ ಎಂಥ ಪರಿಸ್ಥಿತಿಯಲ್ಲಿ ಬಿಟ್ಟು ಕೊಡಬಹುದೆಂಬದನ್ನು ಆಲೋಚಿಸಬೇಕು. ಈ ಹೀನಕೃತ್ಯ ನಿಲ್ಲಬೇಕೆಂದು ಎಲ್ಲರೂ ಬಯಸುತ್ತಾರೆ. ನಾವೆಲ್ಲರೂ ನಮ್ಮ ಶಕ್ತಿ ಸಾಮರ್ಥ್ಯಗಳನ್ನು ಸಂಘಟಿಸಿಕೊಳ್ಳಬೇಕು. ಕೇವಲ ದಯೆದೋರಿದರೆ ಉಪಯೋಗವಿಲ್ಲ. ಇದು ವರೆಗೆ ನಮ್ಮ ಜನರು ಅನುಭವಿಸಿದ್ದು ಸಾಕಾಗಿದೆ. ಇನ್ನಿದು ನಿಲ್ಲಲೇಬೇಕು.

ಪಶ್ಚಿಮ ಪಂಜಾಬದಿಂದ ನಿರಾಶ್ರಿತರನ್ನು ಕರೆದುಕೊಂಡು ಬರುವಲ್ಲಿ ತಡವಾದರೆ ನಮ್ಮ ಜನರ ಪ್ರಾಣಕ್ಕೆ ಅಪಾಯವಿದೆ. ಈಗ ದಿಲ್ಲಿಯಲ್ಲಿ ಮತ್ತು ಇತರ ಕಡೆಗಳಲ್ಲಿ ದಂಗೆ ಪ್ರಾರಂಭವಾದ ಮೂಲಕ ಇತರತ್ರ ಒಳ್ಳೆಯ ಕಾರ್ಯಕ್ಕಾಗಿ ನಿಯೋಜಿಸಬಹುದಾಗಿದ್ದ ಸೈನಿಕರನ್ನು ಪುಂಡರ ನಿಗ್ರಹದಲ್ಲಿ ತೊಡಗಿಸಬೇಕಾಗಿದೆ.

ನಮ್ಮ ಮುಖಂಡರಾದ ಗಾಂಧೀಜಿಯವರು ಇಂದು ದಿಲ್ಲಿಗೆ ಬಂದಿದ್ದಾರೆ. ಅವರ ಭೆಟ್ಟಿಗೆ ಹೋಗಿ ಅವರ ಹತ್ತಿರ ಕುಳಿತಾಗ ನಾವು ನಮ್ಮ ಉಚ್ಚ ಧ್ಯೇಯಗಳನ್ನು ಬಿಟ್ಟು ಎಂತಹ ಅಧಃಪಾತಕ್ಕೆ ಇಳಿದಿದ್ದೇವೆ ಎಂಬ ವಿಚಾರ ಸುಳಿದು ಹೋಯಿತು. ನಾವು ಹಳ್ಳಿಗಳಲ್ಲಿ ಸಂಚರಿಸಲು ಹೋದಾಗ ಜನರು 'ಮಹಾತ್ಮಾ ಗಾಂಧೀಕಿ ಜೈ' 'ಪಂ. ಜವಾಹರಲಾಲ ನೆಹರೂಕಿ ಜೈ' ಎಂದು ಕೂಗುತ್ತಾರೆ. ಇವರಲ್ಲಿ ಪೂಜ್ಯ ಗಾಂಧೀಜಿಯವರ ಹೆಸರಿನಲ್ಲಿ ಕೊಲೆ ಸುಲಿಗೆ ನಡೆಸಿದವರೆಷ್ಟು ಜನರೊ! ಈ ವಿಚಾರ ಬಂದೊಡನೆ ನಮಗೇ ನಾಚಿಕೆಯಾಗುತ್ತದೆ. ಈಗ ಅನುಭವಿಸಿದಷ್ಟು ಸಾಕು. ಇನ್ನು ಮುಂದೆ ನಾವೆಲ್ಲ ಮಹಾತ್ಮರ ಉಪದೇಶದಂತೆ ನಡೆದು ಕೊಂಡು ಅವರು ತೋರಿದ ಸನ್ಮಾರ್ಗವನ್ನೇ ಹಿಡಿಯೋಣ ಈ ಕಾರ್ಯದಲ್ಲಿ ಎಲ್ಲ ಜನರ ಸಹಕಾರವನ್ನೂ ನಾನು ಕೋರುತ್ತೇನೆ" ಎಂದು ಪಂ ನೆಹರು ಆಕಾಶವಾಣಿಯಲ್ಲಿ ಹೇಳಿದರು.

### ಮಹಾತ್ಮರ ಪ್ರಕಟನೆ

ಗಾಂಧೀಜಿಯವರು ಈ ಸಂದರ್ಭದಲ್ಲಿ ಒಂದು ಪ್ರಕಟನೆ ಹೊರಡಿಸಿದ್ದಾರೆ—

"ನಾನೊಂದು ಬಗೆದರೆ ದೈವವೊಂದು ಬಗೆಯಿತು ಎಂಬ ಮಾತು ಇತರರಂತೆ ನನಗೂ ಅನೇಕ ಸಲ ಅನುಭವಕ್ಕೆ ಬಂದಿದೆ. ನಾನು ಕಲಕತ್ತವನ್ನು ಬಿಡುವಾಗ ದಿಲ್ಲಿಯು ಶಾಂತವಿತ್ತು. ಇಂದು ದಿಲ್ಲಿಯ ಹೃದಯವಿದ್ರಾವಕ ಕತೆ ಕೇಳಿ ನಡುಗಿದ್ದೇನೆ. ನನ್ನ ಮುಸ್ಲಿಂ ಸ್ನೇಹಿತರನೇಕರು ಬಂದು ತಮ್ಮ ದುಃಖದ ಕತೆಯನ್ನು ಹೇಳಿ ಹೋಗಿದ್ದಾರೆ. ದಿಲ್ಲಿಯಲ್ಲಿಯ ಪರಿಸ್ಥಿತಿ ಶಾಂತವಾಗುವ ವರೆಗೆ ನಾನು ಪಂಜಾಬಕ್ಕೆ ಹೋಗಬಾರದೆಂದೂ ಸೂಚಿಸಲಾಗಿದೆ. ಇಲ್ಲಿಯ ಪರಿಸ್ಥಿತಿಯನ್ನು ಶಾಂತವಾಗಿಸಲು ನಾನು "ಮಾಡು ಇಲ್ಲವೆ ಮಡಿ" ಎಂಬ ನನ್ನ ಹಳೆಯ ತತ್ವವನ್ನಿಲ್ಲಿ ಅನ್ವಯಿಸಬೇಕಾಗಿದೆ. ನಿರಾಶ್ರಿತರ ಸಿಟ್ಟು ನನಗೆ ಅರ್ಥವಾಗಿದೆ. ಆದರೆ ಅದು ಕ್ಷಣಿಕ ಹುಚ್ಚೆಂದು ಹೇಳಬಹುದು. ಸೇಡು ತೀರಿಸಿಕೊಳ್ಳುವುದರಿಂದ ಪರಿಸ್ಥಿತಿ ಸುಧಾರಿಸದೆ ಇನ್ನಷ್ಟು ಕೆಡುವದು."

## ಶ್ರೀ ರಾ. ಹುಕ್ಕೇರಿಕರರ ೬೧ ನೆಯ ಹುಟ್ಟುಹಬ್ಬ

### ಬಿನ್ನಹ

ಇದೇ ಅಕ್ಟೋಬರ ೨೧ ನೇ ತಾರೀಖಿಗೆ, ಶ್ರೀ ರಾ. ಶ್ರೀ. ಹುಕ್ಕೇರಿಕರರಿಗೆ, ೬೦ ವರ್ಷಗಳು ಪೂರ್ಣವಾಗುವವು. ಭಾರತೀಯ ಸಂಸ್ಕೃತಿಯ ದೃಷ್ಟಿಯಿಂದ ಈ ಸಮಯವು ಮಹತ್ವಪೂರ್ಣವಾದುದು. ಮಾನವನು ತನ್ನ ಜೀವನದಲ್ಲಿ ಅನೇಕ ಅನುಭವಗಳಿಂದ ಮಹತ್ವದ ಮೆಟ್ಟಲನ್ನೇರುವ ಕಾಲ. ಈ ಸಮಯದಲ್ಲಿ ಹೋಮ ಹವನಾದಿಗಳನ್ನು ಮಾಡಿ ಆಯುರಾರೋಗ್ಯಗಳನ್ನೀಯಲು ದೇವರನ್ನು ಪ್ರಾರ್ಥಿಸುವ ವಾಡಿಕೆ.

ಶ್ರೀ. ರಾ. ಶ್ರೀಯವರು ಕರ್ನಾಟಕದ ಹೊಸಯುಗದ ನಾಯಕರಲ್ಲೊಬ್ಬರು, ಅವರು ರಾಷ್ಟ್ರಕ್ಕಾಗಿ ಮಾಡಿದ ತ್ಯಾಗ, ಸಹಿಸಿದ ಕಷ್ಟನಷ್ಟ, ಸಲ್ಲಿಸಿದ ಸೇವೆಗಳಿಗಾಗಿ, ಪ್ರೀತ್ಯಾದರಗಳನ್ನೂ ಕೃತಜ್ಞತೆಗಳನ್ನೂ ವ್ಯಕ್ತಪಡಿಸುವದು ಜನತೆಯ ಕರ್ತವ್ಯ. ಇದು ರಾಷ್ಟ್ರಕಾರ್ಯದ ಪೂಜೆ, ಸನ್ಮಾನ, ರಾಷ್ಟ್ರೀಯ ಗುಣಗಳ ಪೂಜೆ, ಎಂಬ ದೃಷ್ಟಿಯಿಂದ ಈ ಸಮಯದಲ್ಲಿ ಅವರ ಸನ್ಮಾನ ಸಮಾರಂಭವನ್ನೇರ್ಪಡಿಸಲು ನಿಶ್ಚಯಿಸಿ, ಶ್ರೀ. ಬಿಂದು ಮಾಧವ ಬುರ್ಲಿಯವರ ಅಧ್ಯಕ್ಷತೆಯಲ್ಲಿ ಪ್ರಮುಖರ ಸಮಿತಿಯೊಂದನ್ನು ಏರ್ಪಡಿಸಲಾಗಿದೆ

### ಉತ್ಸವದ ರೂಪರೇಷೆ

ಶ್ರೀ ರಾ. ಶ್ರೀಯವರ ಶಿಷ್ಯವೃಂದವೂ ರಾಜಕೀಯ ಗೆಳೆಯರ ವರ್ಗವೂ ಕರ್ನಾಟಕದಲ್ಲಿ ಬಹುದೊಡ್ಡವಿವೆ. ಆದುದರಿಂದ (೧) ಅವರ ವಿದ್ಯಾರ್ಥಿ ವೃಂದದ ಸಂತೋಷ ಸಮ್ಮೇಲನ, (೨) ಅವರ ರಾಜಕೀಯ ಸ್ನೇಹಿತರ ಸಮ್ಮೇಲನ, (೩) ಸಾರ್ವಜನಿಕ ಸನ್ಮಾನ. ಇದು ಮೊದಲನೆಯ ಭಾಗ.

(೨) ಇದೇ ಸಮಯದಲ್ಲಿ 'ನವಕರ್ನಾಟಕದ ಮುನ್ನಡೆ' ಎಂಬ ಒಂದು ಸಂಚಿಕೆಯನ್ನು ಪ್ರಕಟಿಸಿ ಅವರಿಗೆ ಅರ್ಪಿಸುವದು.

ಈ ಸಮಾರಂಭ ಹಾಗು ಪ್ರಕಟನೆಗಳಿಗೆ ಕನಿಷ್ಟ ೩೦೦೦ ರೂ. ಗಳು ಬೇಕೆಂದು ಸಮಿತಿಯು ಅಂದಾಜು ಮಾಡಿದೆ.

ಈ ಉತ್ಸವದ ಹಣವನ್ನು ಸಾರ್ವಜನಿಕವಾಗಿ ಕೇಳದೆ ಅವರ ಮಿತ್ರರನ್ನೂ ವಿದ್ಯಾರ್ಥಿಗಳನ್ನೂ ಹಿತಚಿಂತಕರನ್ನೂ ಸ್ವಾಗತ ಸಮಿತಿಯ ಸದಸ್ಯರನ್ನಾಗಿ ಮಾಡಿಕೊಂಡು ಕೂಡಿಸಬೇಕೆಂದು ಸಮಿತಿಯು ಗೊತ್ತುಪಡಿಸಿದೆ. ಸ್ವಾ. ಸ. ಸದಸ್ಯರ ವಂತಿಗೆ ೨೫, ೧೦, ೫ ಹೀಗೆ ನಿರ್ಣಯಿಸಲ್ಪಟ್ಟಿದೆ. ಅವರ ಹಿತಚಿಂತಕರೂ ಸ್ನೇಹಿತರೂ ವಿದ್ಯಾರ್ಥಿಗಳೂ ಸದಸ್ಯರಾಗಿ ಸಹಾಯವನ್ನೀಯಬೇಕೆಂದು ಸಮಿತಿಯು ಬಿನ್ನವಿಸಿಕೊಳ್ಳುತ್ತದೆ.

## ರಾಷ್ಟ್ರಧ್ವಜಕ್ಕೆ ಅವಮಾನ

ಮಂಡ್ಯದ ಹತ್ತಿರಿರುವ ಸೋಮಹಳ್ಳಿಯಲ್ಲಿಯ ಸಾರ್ವಜನಿಕ ಸ್ಥಳದಲ್ಲಿ ಏರಿಸಲಾಗಿದ್ದ ರಾಷ್ಟ್ರಧ್ವಜವನ್ನು ಜಿಲ್ಹಾ ಬೋರ್ಡಿನ ಅಧ್ಯಕ್ಷರಾದ ಶ್ರೀ ಮಲ್ಲೇಶರವರು ಮತ್ತೂ ಅವರ ಬಂಧುಬಳಗದವರು ಸುಟ್ಟು ಹಾಕಿದರೆಂದು ಸುದ್ದಿ ಬಂದಿದೆ. ಜಿಲ್ಹಾ ಕಾಂಗ್ರೆಸ ಸಮಿತಿಯು ಇದರ ವಿರುದ್ಧ ಸರದಾರ ವಲ್ಲಭಭಾಯಿ ಪಟೇಲರಿಗೆ ತಂತಿ ಕಳುಹಿ ಉಗ್ರ ಕ್ರಮ ತೆಗೆದುಕೊಳ್ಳಬೇಕೆಂದು ಬಿನ್ನವಿಸಿಕೊಂಡಿದ್ದಾರೆ

ಮದ್ದೂರಲ್ಲಿ ಕೆಲವು ಕಾಂಗ್ರೆಸೇತರರು ವಿದ್ಯಾರ್ಥಿಗಳ ಮೆರವಣಿಗೆಯ ಮೇಲೆ ಹಲ್ಲೆ ಮಾಡಿ ರಾಷ್ಟ್ರಧ್ವಜವನ್ನು ಸುಟ್ಟುಹಾಕಿದರೆಂದು ಸುದ್ದಿ ಬಂದಿದೆ. ಓರ್ವ ವಿದ್ಯಾರ್ಥಿಗೆ ತೀವ್ರ ಸ್ವರೂಪದ ಗಾಯಗಳಾಗಿವೆ.

---

ಬೆಂಗಳೂರಿನ ದಾನಶೂರ ಕರ್ಣರಾದ ಶ್ರೀ ಬಿ ಎಂ. ಶ್ರೀನಿವಾಸಯ್ಯನವರು ಬೆಂಗಳೂರಿನಲ್ಲಿ ತಮ್ಮ ವಸತಿಸ್ಥಾನದಲ್ಲಿಯೇ ೨೦೦ ಜನ ನಿರ್ವಾಸಿತರಿಗೆ ೩ ತಿಂಗಳುಗಳ ವರೆಗೆ ಮತ್ತು ಮುಂಬಯಿಯಲ್ಲಿ ೫೦ ಜನ ನಿರ್ವಾಸಿತರಿಗೆ ಮೂರು ತಿಂಗಳ ವರೆಗೆ ಸ್ವಂತ ವೆಚ್ಚದಿಂದ ಅನ್ನ ವಸತಿಯನ್ನು ಕಲ್ಪಿಸಿಕೊಡುವದಾಗಿ ಪಂಡಿತ ಜವಾಹರಲಾಲರಿಗೆ ಕೇಳಿಕೊಂಡಿದ್ದಾರೆ.

## ಕರ್ನಾಟಕ ಏಕೀಕರಣ ಮಹಾಸಮಿತಿ ಕಾರ್ಯಕಲಾಪ

ತಾ. ೬ ಮತ್ತು ೭ ರಲ್ಲಿ ಬಾಗಲಕೋಟಿ (ಬಸವೇಶ್ವರ ಕಾಲೇಜ) ಯಲ್ಲಿ ಕೂಡಿದ ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮೀಟಿ ಕೌನ್ಸಿಲ್, ಕರ್ನಾಟಕ ಏಕೀಕರಣ ಸಂಘದ ಕಾರ್ಯಕಾರೀ ಮಂಡಳ ಮತ್ತು ಕರ್ನಾಟಕ ಏಕೀಕರಣ ಕ್ರಿಯಾಸಮಿತಿಗಳ ಸಂಯುಕ್ತ ಸಭೆಯಲ್ಲಿ ಸ್ವೀಕೃತವಾದ ಗೊತ್ತುವಳಿಗಳು—

(೧) ದಾವಣಗೆರೆ ಸಮಿತಿಯ ಪರವಾಗಿ ೧೧—೮—೪೭ ನೇ ದಿವಸ ಗಮಗಿನಲ್ಲಿ ಕೂಡಿದ ಅಖಿಲ ಕರ್ನಾಟಕ ಮಹಾಧಿವೇಶನದವರು "ದಾವಣಗೇರೆ ಸಮಿತಿಯೇ ಇನ್ನು ಮುಂದೆ ಕ್ರಿಯಾ ಸಮಿತಿಯಾಗಿ ಮಾರ್ಪಟ್ಟು ಹೆಚ್ಚು ಜನರನ್ನು ಸೇರಿಸಿಕೊಳ್ಳುವ ಅಧಿಕಾರ ಹೊಂದಿ ಕರ್ನಾಟಕ ಪ್ರಾಂತೀಕರಣದ ಬಗ್ಗೆ ಮುಂದಿನ ಯಾವತ್ತು ಕಾರ್ಯವನ್ನು ಕೈಕೊಳ್ಳಬೇಕು." ಮುಂತಾಗಿ ಸ್ವೀಕರಿಸಿದ ಯಾವತ್ತು ನಿರ್ಣಯಗಳಿಗೆ ಈ ಸಭೆಯು ತನ್ನ ಬೆಂಬಲವನ್ನು ನೀಡುವದಲ್ಲದೆ ಕರ್ನಾಟಕ ಪ್ರಾಂತೀಕರಣದ ಮುಂದಿನ ಯಾವತ್ತು ಕಾರ್ಯವನ್ನು ನಿರ್ವಹಿಸಬೇಕೆಂದು ಈ ಸಂಯುಕ್ತ ಸಭೆಯು ಕರ್ನಾಟಕ ಮಹಾಧಿವೇಶನ ಕ್ರಿಯಾ ಸಮಿತಿಗೆ ಆದೇಶಿಸುತ್ತದೆ.

(೨) ಕ್ರಿಯಾ ಸಮಿತಿಯು ತನ್ನ ಕಾರ್ಯಾಲಯವನ್ನು ಹುಬ್ಬಳ್ಳಿಯಲ್ಲಿಯೇ ನಡೆಸಬೇಕೆಂದು ಈ ಸಭೆಯು ನಿರ್ಣಯಿಸುತ್ತದೆ. ಕರ್ನಾಟಕ ಏಕೀಕರಣ ಸಂಘವು ತನ್ನ ಕಚೇರಿಯ ಕಾರ್ಯವನ್ನು ಹಾಗು ಕ. ಪ್ರಾ. ಕಾಂ. ಕಮೀಟಿಯವರು ಏಕೀಕರಣಕ್ಕೆ ಸಂಬಂಧಿಸಿದ ಎಲ್ಲ ಕಾಗದ ಪತ್ರಗಳನ್ನು ಕ್ರಿಯಾ ಸಮಿತಿಯ ಕಾರ್ಯಾಲಯಕ್ಕೆ ಒಪ್ಪಿಸಬೇಕೆಂದು ಕೇಳಿಕೊಳ್ಳುತ್ತದೆ.

(೩) ಕರ್ನಾಟಕ ಮಹಾಧಿವೇಶನ ಕ್ರಿಯಾ ಸಮಿತಿಯವರು ಹೆಚ್ಚಿನ ಸದಸ್ಯರನ್ನು ಸೇರಿಸಿಕೊಂಡದ್ದನ್ನು ಈ ಸಂಯುಕ್ತ ಸಭೆಯು ಒಪ್ಪುತ್ತದೆ. ಮತ್ತು ಈ ಸಮಿತಿಗೆ ಕರ್ನಾಟಕ ಏಕೀಕರಣ ಮಹಾಸಮಿತಿ ಎಂದು ಕರೆಯಬೇಕೆಂದು ನಿರ್ಣಯಿಸುತ್ತದೆ.

(ಇದರಲ್ಲಿ ಒಟ್ಟಿಗೆ ೧೧೦ ಸದಸ್ಯರು ಇರುವರು)

(೪) ಕರ್ನಾಟಕ ಏಕೀಕರಣದ ಮಹಾ ಸಮಿತಿಯು ಕೆಳಗೆ ಕಾಣಿಸಿದ ಕ್ರಿಯಾ ಸಮಿತಿಯನ್ನು ನೇಮಿಸಬೇಕೆಂದು ನಿರ್ಧರಿಸುತ್ತದೆ ಮತ್ತು ಇಬ್ಬರನ್ನು ಹೆಚ್ಚಿಗೆ ಸೇರಿಸಿಕೊಳ್ಳಲು ಈ ಸಭೆಗೆ ಅಧಿಕಾರ ಕೊಟ್ಟಿರುತ್ತದೆ.

ಶ್ರೀಗಳಾದ (೧) ಎಸ್. ನಿಜಲಿಂಗಪ್ಪ ಅಧ್ಯಕ್ಷ (೨) ಜಿನರಾಜ ಹೆಗಡೆ (೩) ಟಿ. ಆರ್. ನೇಸ್ವಿ (೪) ಬಿ. ಎನ್. ಮುನವಳ್ಳಿ (ಇವರೆಲ್ಲರೂ ಉಪಾಧ್ಯಕ್ಷರು) (೫) ಅಂದಾನೆಪ್ಪಾ ದೊಡ್ಡಮೇಟಿ ಜಕ್ಕಲಿ, ಪ್ರಧಾನ ಕಾರ್ಯದರ್ಶಿ, (೬) ಶ್ರೀನಿವಾಸರಾವ ಮಂಗಳವೇಡು ಬಾಗಲಕೋಟಿ ಸಹಕಾರ್ಯದರ್ಶಿ, (೭) ಶಾಂತಪ್ಪಾ ಯಳಮಲಿ ಗದಗ ಕೋಶಾಧ್ಯಕ್ಷ (೮) ಬಿ. ಎನ್. ದಾತಾರ, (೯) ಆರ್. ಆರ್. ದಿವಾಕರ. (೧೦) ಚನಬಸಪ್ಪಾ ಅಂಬಲಿ, (೧೧) ವೀರನಗೌಡರು. (೧೨) ಕೆ. ಆರ್. ಕಾರಂತ, (೧೪) ಯು. ಶ್ರೀನಿವಾಸ ಮಲ್ಯ, (೧೫) ಎಸ್. ಎಸ್. ಶಾಸ್ತ್ರಿ (೧೬) ದಿನಕರ ದೇಸಾಯಿ, (೧೭) ಸಿ. ಎಮ್. ಪೂಣಚ್ಚಾ, (೧೮) ಆರ್. ವ್ಹಿ. ಜಾಹಾಗೀರದಾರ (೧೯) ಆರ್ ವ್ಹಿ. ಶಿರೂರ ಇವರು ಸದಸ್ಯರು.

(೫) ಮೈಸೂರು ಮತ್ತು ಹೈದರಾಬಾದ ಸಂಸ್ಥಾನಗಳ ಪ್ರಜೆಗಳು ತಮ್ಮ ಸ್ವಾತಂತ್ರ್ಯದ ಸಲುವಾಗಿ ನಡೆಯಿಸಿದ ಹೋರಾಟದ ಬಗ್ಗೆ ಕರ್ನಾಟಕ ಏಕೀಕರಣ ಮಹಾಸಮಿತಿಯು ತನ್ನ ಹಾರ್ದಿಕ ಸಹಾನುಭೂತಿಯನ್ನು ವ್ಯಕ್ತಮಾಡುವುದಲ್ಲದೆ ದೇಶದ ಸ್ವಾತಂತ್ರ್ಯ ಹಾಗು ಕರ್ನಾಟಕ ಪ್ರಾಂತೀಕರಣ ಇವುಗಳ ದೃಷ್ಟಿಯಿಂದ ಪ್ರಜೆಗಳ ಹೋರಾಟಕ್ಕೆ ಯಶಸ್ಸು ದೊರಕುವುದು ಅಗತ್ಯ ಎಂಬ ಅಭಿಪ್ರಾಯದಿಂದ ಈ ಹೋರಾಟಕ್ಕೆ ಎಲ್ಲ ತರದ ಬೆಂಬಲದ ಆಶ್ವಾಸನವನ್ನು ನೀಡುತ್ತದೆ ಮತ್ತು ಆ ರೀತಿ ಬೆಂಬಲವನ್ನು ಕೊಡಲು ಸಾರ್ವಜನಿಕರಲ್ಲಿ ಕೇಳಿಕೊಳ್ಳುತ್ತದೆ.

[೬] ದಕ್ಷಿಣ ಸಂಸ್ಥಾನಗಳ ರಾಜರು ಪ್ರಜಾಜನರ ಒಪ್ಪಿಗೆ ಇಲ್ಲದೆ, ಆರ್ಥಿಕ ಭೌಗೋಲಿಕ ಹಾಗೂ ಆಡಳಿತೆಯ ದೃಷ್ಟಿಯಿಂದ ಸಾಧುವಲ್ಲದ ಒಕ್ಕೂಟವನ್ನೊಂದು ನಿರ್ಮಾಣ ಮಾಡಿ ಪ್ರಜಾಜನರ ಮೇಲೆ ಹೇರಬೇಕೆಂಬ ಅವರ ಪ್ರಯತ್ನವನ್ನು ಈ ಸಭೆಯು ತೀವ್ರವಾಗಿ ಖಂಡಿಸುತ್ತದೆ. ಮತ್ತು ಈ ತರದ ಒಕ್ಕೂಟವನ್ನು ಆಯಾಯ ಸಂಸ್ಥಾನಗಳ ಜನರು ಪ್ರತಿಭಟಿಸುವರಾದರೆ ಅವರಿಗೆ ಈ ಸಭೆಯು ತನ್ನ ಹಾರ್ದಿಕ ಸಹಾಯವನ್ನು ಹಾಗು ಸಹಾನುಭೂತಿಯನ್ನು ನೀಡುತ್ತದೆ

# ಅಂತರರಾಷ್ಟ್ರೀಯ

## ಕನ್ಸರ್ವೇಟಿವ್ ಪಕ್ಷದ ಆರ್ಥಿಕಪಟ

ಈಗ ಇಂಗ್ಲಂಡಿನಲ್ಲಿ ಬಿಸಿ ದೋಸೆಯಂತೆ ಮಾರಲಾಗುತ್ತಿರುವ ಕನ್ಸರ್ವೇಟಿವ್ ಪಕ್ಷ ತಯಾರಿಸಿದ ಆರ್ಥಿಕ ಪಟದಿಂದ ಇಂದು ಅಲ್ಲಿಯ ಬ್ರಿಟಿಶ್ ರಾಜಕೀಯ ವಿಚಾರವೆತ್ತ ಹರಿಯುತ್ತಿದೆಯೆಂಬುದನ್ನು ಸ್ಥೂಲವಾಗಿ ತಿಳಿಯಬಹುದು. ಉಕ್ತ ಪಕ್ಷದವರು ಬರಿದೆ ಉಳಿದ ಪಕ್ಷಗಳ ಧೋರಣವನ್ನು ಟೀಕಿಸುವರೆಂದೂ ಅವರಲ್ಲಿ ಬೇರೆ ಯಾವ ವೈಕಲ್ಪಿಕ ಯೋಜನೆಯೂ ಇಲ್ಲವೆಂದೂ ಮಾಡಲಾದ ಆರೋಪಕ್ಕೆ ಮೇಲೆ ಹೇಳಿದ ಪಟವು ಉತ್ತರವಾಗಿ ಹೊರಟಿದೆ.

ಸರಕಾರದ ಸರ್ವಜನಗ್ರಾಹ್ಯವಾದ ಮುದ್ರಣದ 'ಉತ್ಪಾದನಕ್ಕಾಗಿ ಹೋರಾಟ', ಎಂಬ ಪುಸ್ತಕದ ಪ್ರತಿಗಳಿಗಿಂತ ಹೆಚ್ಚು ಸಂಖ್ಯೆಯಲ್ಲಿ ಮೇಲೆ ಹೇಳಿದ ಕನ್ಸರ್ವೇಟಿವ್ ಪಕ್ಷದ ಆರ್ಥಿಕ ಪಟದ ಪ್ರತಿಗಳು ಖರ್ಚಾಗಿ ಹೋಗಿವೆಯಂತೆ.

ಔದ್ಯೋಗಿಕ ಪಟದ ೫॥ ಲಕ್ಷ ಪ್ರತಿಗಳನ್ನು ಮೂರೇ ವಾರಗಳಲ್ಲಿ ಉಕ್ತ ಪಕ್ಷ ಮಾರಾಟ ಮಾಡಿತು. ಸರಕಾರ ಮುದ್ರಿಸಿದ 'ಉತ್ಪಾದನಕ್ಕಾಗಿ ಹೋರಾಟ'ದ ೩ ಲಕ್ಷ ಪ್ರತಿಗಳನ್ನು ೩ ತಿಂಗಳಾದರೂ ಸಂಪೂರ್ಣ ಮಾರಾಟ ಮಾಡಲಾಗಲಿಲ್ಲ.

ಸರಕಾರಿ ಸ್ಟೇಶನರಿ ಆಫೀಸೆಂಬುದು ಬ್ರಿಟನ್ನಿನಲ್ಲಿಲ್ಲ ಅತ್ಯಂತ ದೊಡ್ಡ ಪ್ರಕಾಶನ ಸಂಸ್ಥೆಯೆನಿಸಿದೆ. ಕಾರ್ಮಿಕರ ಸರಕಾರವು ಒಂದರಮೇಲೊಂದರಂತೆ ಅತಿ ತ್ವರೆಯಿಂದ ಕಾಯಿದೆ ಪಾಸು ಮಾಡುತ್ತಿರುವುದರಿಂದ ಪ್ರಕಾಶನದಲ್ಲಿ ಅದರೊಡನೆ ಹೆಜ್ಜೆಯಿಡುವುದು ಅಸಾಧ್ಯವಾಗಿದೆಯೆಂದು ಸರಕಾರದ ಮೇಲೆ ಅದರ ದೂರು; ಅಕಸ್ಮಾತ್ತಾಗಿ ಶ್ವೇತ ಪತ್ರದಂತಹ ಪ್ರಧಾನ ವಸ್ತುವು ತಡವಾಗಿ ಪ್ರಕಟವಾದುದು ಅದು ಹುಟ್ಟಿದ ೧೭೮೬ ರಿಂದ ಇಂದಿನ ವರೆಗಿನ ಅದರ ಚರಿತ್ರೆಯಲ್ಲಿಯೇ ಅಭೂತಪೂರ್ವವಾದುದೆಂದು ತಜ್ಞರ ಮತ.

## ಫ್ರಾನ್ಸಿನ ಪರಿಸ್ಥಿತಿ

ಐಕ್ಯವೆಷ್ಟೇ ಅಗತ್ಯವಿದ್ದರೂ ರ್‍ಹೂರ ಪ್ರದೇಶದ ಬಗ್ಗೆ ನಿರ್ಣಯವಾಗಲಿರುವುದರಿಂದ, ಜರ್ಮನಿಯ ಭವಿತವ್ಯದ ಬಗ್ಗೆ ಪರರಾಷ್ಟ್ರ ಮಂತ್ರಿಗಳ ಸಮ್ಮೇಳನ ಕೂಡಲಿರುವುದರಿಂದ ಮತ್ತು ಮಾರ್ಶಲ ಯೋಜನೆಯು ಇನ್ನೂ ಸಂದಿಗ್ಧ ಸನ್ನಿವೇಶದಲ್ಲಿರುವುದರಿಂದ ಒಕ್ಕಟ್ಟಿನಿಂದಿರುವುದರ ಮಹತ್ವವೆಷ್ಟೇ ಇದ್ದರೂ ಫ್ರೆಂಚ ಸರಕಾರವು ಒಂದರಮೇಲೊಂದರಂತೆ ಬಿಕ್ಕಟ್ಟುಗಳನ್ನು ಎದುರಿಸುತ್ತ ಹೋಗಬೇಕಾಗಿ ಬಂದಿದೆ.

ಎಂ. ರಮಾದಿಯರ ಆರ್ಥಿಕ ಧೋರಣದಿಂದುಂಟಾದ ಎಡಪಕ್ಷದ ಸಾಮ್ಯವಾದಿಗಳ ಅಸಂತೃಪ್ತಿಗೆ ಪಾಪ್ಯುಲರ್ ರಿಪಬ್ಲಿಕನ್ ಪಕ್ಷದ ಎಂ. ಜಾರ್ಜಸ್ ಬಿಡಾಲ್ಟ ಎಂಬ ಫ್ರೆಂಚ ಪರರಾಷ್ಟ್ರ ಮಂತ್ರಿಯು ಹೊಸ ಸರಕಾರ ರಚನೆಯ ಪ್ರಯತ್ನವು ಸೇರಿಕೊಂಡು ಗಾಯದ ಮೇಲೆ ಬರೆ ಕೊಟ್ಟಂತಾಗಿದೆ. ಬಿಕ್ಕಟ್ಟನ್ನು ಸ್ವಾಗತಿಸುವಂತೆ ತೋರುವ ಸಮಾಜವಾದಿಗಳು ಸಂಯುಕ್ತ ಮಂತ್ರಿಮಂಡಲವನ್ನು ಸೇರುವ ಯೋಜನೆ ನಡೆಸುತ್ತಿರುವಂತೆ ಕಾಣುತ್ತದೆ. ಮುಖ್ಯ ಮಂತ್ರಿಗೇನೊ ನೊನ್ನೆ ನೊನ್ನೆ ವಿಶ್ವಾಸದ ಆಶ್ವಾಸನ ದೊರೆತರೂ ಅದು ಕೇವಲ ಸಂಕುಚಿತ ಬಹುಮತದಿಂದ. ಅದರಿಂದ ತಿಳಿದುಬರುವುದದೇನೆಂದರೆ, ಬೇರೆ ಉತ್ತಮ ಮಂತ್ರಿಮಂಡಲ ರಚಿಸಲಾರದಾಗಿರುವುದರಿಂದ ಮಾತ್ರ ರಮೇದಿಯರ ಮಂತ್ರಿಮಂಡಲವನ್ನು ಉಳಿಯಗೊಡಲಾಗಿದೆ ಎಂಬುದೇ.

ಮೇ ಮತ್ತು ಜುಲೈ ಈ ಎರಡು ತಿಂಗಳುಗಳಲ್ಲೂ ಇಂದಿನ ಸರಕಾರವನ್ನು ಅಧಿಕಾರದಲ್ಲುಳಿಸಲು ಬಹು ಸಂಕುಚಿತ ಬಹುಮತದ ಮೇಲೆ ಸಾಮ್ಯವಾದಿಗಳ ಒಪ್ಪಿಗೆ ದೊರೆಯಿತು. ಫ್ರೆಂಚರಲ್ಲಿ ಐಕ್ಯ ತರಲು ಯತ್ನಿಸುತ್ತಿರುವ ಜನರಲ್ ದಿಗಾಲೆಯು ಜನಪ್ರಿಯತೆಯನ್ನು ಕಂಡುಕೊಂಡ, ಸಮಾಜ ವಾದಿಗಳ ನಿಂದೆಗಳನ್ನು ಕಡೆಗಣಿಸಿದ ಎಡಪಕ್ಷದ ಸಾಮ್ಯವಾದಿಗಳಿಂದ ಇಲ್ಲಿಯ ವರೆಗೆ ಸರಕಾರಕ್ಕೆ ಯಾವ ಭಯವೂ ಕಂಡುಬಂದಿಲ್ಲ. ಬಲಪಕ್ಷದವರು ಪುನಃ ವರ್ಚಸ್ಸನ್ನು ಪಡೆಯುವುದು ಅವರಿಗೆ ಬೇಡವಾದ್ದರಿಂದ ಮುಖ್ಯವಾಗಿ ಫ್ರಾನ್ಸು ಈಗ ಮಾರ್ಶಲ ಯೋಜನೆಯೊಡನೆ ಸಹಕರಿಸುವುದರಿಂದ ಬಲಗೊಳ್ಳಲಿಯುತ್ತಿದೆಯೆಂಬುದೇ ಎಡಪಕ್ಷದ ಸಾಮ್ಯವಾದಿಗಳಿಗೆ ಹಿಡಿದಿರುವ ಚಿಂತೆ.

## ರಶಿಯಾ--ಅಮೇರಿಕಗಳ ದ್ವಂದ್ವ

ಈಗ ೧೫ ತಿಂಗಳುಗಳಿಂದ ನಡೆದುಕೊಂಡು ಬಂದ ರಶಿಯಾ-ಅಮೇರಿಕಗಳ ಬಿಕ್ಕಟ್ಟು ಕೊರಿಯದ ಪ್ರಶ್ನೆಯನ್ನು ಇಂದು ಪ್ರಾಧಾನ್ಯಕ್ಕೆ ತಂದಿದೆ. ಸೋವಿಯಟ್—ಅಮೇರಿಕನ್ ಸಮಿತಿಯ ಮಾತುಕತೆ, ಕಾರ್ಯಕಲಾಪ, ಒಪ್ಪಂದ ಕರಾರುಗಳ ವ್ಯವಹಾರ ಇವು ಕಳೆದ ಅಗಸ್ ತಿಂಗಳಲ್ಲಿ ಕೊನೆಗೊಳ್ಳುವಂತಾಗಬೇಕೆಂದು ಮಾರ್ಶಲ್ಲನು ಎಂ. ಮೊಲಟೋವನಿಗೆ ತಿಳಿಸಿದ್ದ. ಆದರೆ ಆ ಅವಧಿಯೀಗ ಮೀರಿಹೋಯಿತು. ಕೊರಿಯದಲ್ಲಷ್ಟೇ ಏಕೆ, ಜಪಾನಿನಲ್ಲಿ ಕೂಡ ರಶಿಯಾ—ಅಮೇರಿಕೆಗಳಲ್ಲಿ ಯಾವ ವಿಧದ ಒಮ್ಮತವೂ ಉಂಟಾಗದೆ ಪರಿಸ್ಥಿತಿ ತೀರ ಕಟ್ಟು ಹೋಗಿದೆ.

ಜಪಾನಿನ ಶಾಂತಿ ಸಂಧಾನಕ್ಕೆ ಪ್ರಯತ್ನ ನಡೆಯಲಾರಂಭವಾದಂದಿನಿಂದ ಅಮೇರಿಕದ ವಿರುದ್ಧ ರಶಿಯದ ಪ್ರಚಾರವು ಕಟುತರವಾಗುತ್ತ ಹೋಗಿದೆ. ಸೈನ್ಯವಿಸರ್ಜನ ಸಂಘದ ಹೆಸರಿನಲ್ಲಿ ಜಪಾನಿ ಯುದ್ಧಾಧಿಕಾರಿಗಳಿಗೆ ಅಮೇರಿಕ ರಕ್ಷಣೆ ಕೊಡುತ್ತಿದೆಯೆಂದೂ ಜಪಾನೀ ಆತ್ಮತ್ಯಾಗ ಸಿದ್ಧ ವೈಮಾನಿಕರನ್ನು ಅಮೇರಿಕದ ವಿಮಾನದಲಕ್ಕೆ ಸೇರಿಸಿಕೊಳ್ಳಲಾಗುತ್ತಿದೆಯೆಂದೂ ಅಮೇರಿಕದ ಮೇಲೆ ರಶಿಯದ ಆರೋಪ.

ಕೊರಿಯದ ಪ್ರಾಂತಿಕ ಸರಕಾರ ರಚನೆಗಾಗಿ ಅಲ್ಲಿಯ ಪಕ್ಷಗಳನ್ನು ಕೇಳಬೇಕಾಗಿರುವ ಕೆಲ ಭಿನ್ನಾಭಿಪ್ರಾಯಗಳ ನಿಷ್ಕರ್ಷದಲ್ಲಿ ಧ್ಯೇಯ ಭೇದದಿಂದಾಗಿ ಒಂದನ್ನೊಂದು ಸಾಶಂಕದೃಷ್ಟಿಯಿಂದ ನೋಡುತ್ತಿರುವುದರಿಂದ ಸೋವಿಯಟ್ ಅಮೇರಿಕನ್ ಸಮಿತಿಯ ಸಭೆಯಿಂದ ಎಂದಿಗೂ ಒಮ್ಮತಕ್ಕೆ ಬರಲು ಸಾಧ್ಯವಿಲ್ಲವೆಂಬುದು ಸ್ಪಷ್ಟವಿದೆ. ಈಗಿನ ತಳಹದಿಯ ಮೇಲೆ ಯಾವ ಪ್ರಗತಿಯೂ ಸಾಧಿಸದು. ಉಕ್ತಪ್ರಶ್ನೆಗೆ ನೇರವಾಗಿ ಸಂಬಂಧಿಸಿದ ಬ್ರಿಟನ್ ಮತ್ತು ಚೀನದ ಸರಕಾರಗಳು ಆ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ವಿಶದಪಡಿಸಿದರೆ ಒಂದು ಒಪ್ಪಂದಕ್ಕೆ ಬಂದು ಮುಟ್ಟಬಹುದಾಗಿ ತೋರುತ್ತದೆ.

## ಯಾರ್ಕಶಾಯರ ಸಂಪನ್ನು ನಿಲ್ಲಿಸುವ ಪ್ರಯತ್ನ

ಗಣಿ ಕೂಲಿಕಾರರ ಸಂಘದ ಅಧಿಕಾರಿಗಳನ್ನೂ ಸರಕಾರೀ ಗಣಿಗಳನ್ನು ನಡೆಸುವ ರಾಷ್ಟ್ರೀಯ ಕಲ್ಲಿದ್ದಲು ಕೂಟದ ಸದಸ್ಯರನ್ನೂ ತಾ. ೧೫ ರಲ್ಲಿ ಇಂಗ್ಲಂಡಿನ ಸೌದೆಯ ಮಂತ್ರಿಗಳಾದ ಶ್ರೀ ಇಮ್ಯಾನ್ಯುಯಲ್ ಶಿನ್‌ವೆಲ್‌ರವರು ಕಂಡು ಯಾರ್ಕಶಾಯರ ಸಂಪಿನ ವಿಷಯವಾಗಿ ಮಾತನಾಡಿದರು.

ಎಲ್ಲರೂ ತಿರುಗಿ ಕೆಲಸಕ್ಕೆ ಕೂಡಲೇ ಬಂದು ನಷ್ಟ ಭರ್ತಿ ಮಾಡುವ ಸರ್ವತೋಮುಖ ಪ್ರಯತ್ನಮಾಡುವರೆಂದು ನಂಬಲಾಗಿದೆಯೆಂದು ಶಿನ್‌ವೆಲ್ಲರು ಒಂದು ಅಧಿಕೃತ ಪ್ರಕಟನೆಯಲ್ಲಿ ಸಾರಿದ್ದಾರೆ. ಅದು ಕಲ್ಲಿದ್ದಲ ಕೂಟ ಮತ್ತು ಕೂಲಿಕಾರರ ಪರಸ್ಪರ ಶಕ್ತಿಶೋಲನವೇನೆಂದು ಕೇಳಿದಾಗ ಅವರು ನಿಷೇಧಾರ್ಥದ ಉತ್ತರವಿತ್ತರು. ಶಿನ್‌ವೆಲ್ಲರೂ ಸಂಘವೂ ಕೂಟವೂ ಕೂಲಿಕಾರರ ಕರಾರ ಪತ್ರದ ಮೇರೆಗೆ ವ್ಯವಹರಿಸಬೇಕೆಂಬ ಬಗ್ಗೆ ಒಮ್ಮತಕ್ಕೆ ಬಂದಿದ್ದಾರೆ.

ಸಂಪು ಪ್ರಾರಂಭವಾದಂದಿನಿಂದ ದಿನಕ್ಕೆ ೬೦ ಸಾವಿರ ಟನ್ನಿನಷ್ಟು ಕಲ್ಲಿದ್ದಲು ಉತ್ಪಾದನ ಕಡಿಮೆಯಾಗಿ ದೇಶಕ್ಕೆ ನಷ್ಟವುಂಟಾಗಿದೆಯೆಂದು ಗೊತ್ತಾಗಿದೆ. ಲಂಡನ್ನಿನಲ್ಲಿ ಮಾತುಕತೆ ನಡೆದು ಒಂದು ನಿರ್ಣಯಕ್ಕೆ ಬರುವ ವರೆಗೆ ಪರಿಸ್ಥಿತಿಯಲ್ಲಿ ಬದಲಾವಣೆಯುಂಟಾಗುವಂತಿಲ್ಲ. ಕಲ್ಲಿದ್ದಲ ಅಭಾವದಿಂದ ಕೆಲವೇ ದಿನಗಳಲ್ಲಿ ಯಾರ್ಕಶಾಯರಿನ ಬಟ್ಟೆಯ ಮತ್ತು ಎಂಜಿನಿಯರಿಂಗ ಕಾರಖಾನೆಗಳನ್ನು ಮುಚ್ಚಬೇಕಾಗಿಬರಬಹುದು. ಆದುದರಿಂದ ಸಂಪಿನ ಮುಕ್ತಾಯದ ಬಗ್ಗೆ ಬಹಳ ಉತ್ಕಂಠೆಯಿಂದ ಪ್ರಯತ್ನ ನಡೆಯುತ್ತಿದೆಯೆಂಬುದಾಗಿ ತಿಳಿದು ಬರುತ್ತದೆ.

## ಡಾಲರಿನ ಬಿಕ್ಕಟ್ಟಿನಮೇಲೆ ಮಾತುಕತೆ

ಬ್ರಿಟನ್ನಿನ ಇಂದಿನ ಡಾಲರ್ ದಾರಿದ್ರ್ಯಯುಗಕ್ಕೆ ವಿಶೇಷ ಮಹತ್ವ ಕೊಟ್ಟು ಸಾಮಾನ್ಯ ಹಣಕಾಸಿನ ಸನ್ನಿವೇಶವನ್ನು ಕುರಿತು ಬ್ರಿಟಿಶ ಕೋಶಾಧಿಕಾರಿಗಳ ಹಾಗೂ ಸಂಯುಕ್ತಾಧಿಪತ್ಯದ (ಕಾಮನವೆಲ್ತ್) ನಡುವಣ ಮಾತುಕತೆಯನ್ನು ದಕ್ಷಿಣ ಆಫ್ರಿಕವು ಪ್ರಾರಂಭಿಸಿತೆಂದು ಅಧಿಕೃತವಾಗಿ ಹೇಳಲಾಗಿದೆ.

ಜಿನೀವಾ ಸುಂಕದ ಚರ್ಚೆಗಾಗಿ ದಕ್ಷಿಣ ಆಫ್ರಿಕದ ಪ್ರತಿನಿಧಿ ಪಂಗಡವನ್ನು ಕರೆದುಕೊಂಡು ಹೋಗಿದ್ದ ದಕ್ಷಿಣ ಆಫ್ರಿಕ ಒಕ್ಕೂಟದ ಹಣಕಾಸಿನ ಖಾಯಂ ಕಾರ್ಯದರ್ಶಿಗಳಾದ ಡಾ ಜೆ.ಡಿ. ಹೊಲ್ಲೊವೆಯವರು ಜಿನೀವಾದಿಂದ ಲಂಡನ್ನಿಗೆ ಆಗಮಿಸಿದ್ದಾರಲ್ಲದೆ ಲಂಡನ್ನಿನಲ್ಲಿಯು ದ. ಆಫ್ರಿಕ ಗೃಹವು ಉಭಯ ಹಿತದೃಷ್ಟಿಯಿಂದ ಬ್ರಿಟನ್ನಿನೊಡನೆ ಮಾತುಕತೆ ನಡೆಸಲು ದ. ಆ. ಸರಕಾರವು ಅವರನ್ನು ಅಧಿಕೃತ ಪ್ರತಿನಿಧಿಯನ್ನಾಗಿ ಕಳುಹಿದೆಯೆಂದು ಪ್ರಕಟಿಸಿದೆ. ಅದೇ ಪ್ರಕಟನೆಯ ಪ್ರಕಾರ ಬ್ರಿಟನ್ನಿಗೆ ಬಿಕ್ಕಟ್ಟಿರುವ ಭಾಗಗಳಲ್ಲೆಲ್ಲ ಅದಷ್ಟು ಅದಕ್ಕೆ ನೆರವಾಗುವಂತೆ ಚರ್ಚೆ ನಡೆಯುವುದೆಂದು ಗೊತ್ತಾಗುತ್ತದೆ.

ಆಸ್ಟ್ರೇಲಿಯವು ಕೂಡ ಮಾತೃಭೂಮಿಯಾದ ಬ್ರಿಟನ್ನಿಗೆ ತಾನು ಯಥಾಶಕ್ತಿ ಸಹಾಯ ನೀಡುವುದಾಗಿ ಆಗಲೇ ಸಾರಿದೆ; ಅಲ್ಲದೆ ಇಂಡಿಯ ಪಾಕಿಸ್ತಾನ ಅಧಿರಾಜ್ಯಗಳೂ ಸಂಯುಕ್ತ ಸುಂಕ ಸಂಘದ ತಳಹದಿಯಮೇಲೆ ಉಳಿದೆಲ್ಲ ಸದಸ್ಯ ರಾಷ್ಟ್ರಗಳೊಡನೆ ಮಾತುಕತೆ ನಡೆಸಲೊಪ್ಪಿವೆ. ಆದರೆ ಬ್ರಿಟನ್ನಿನ ಅಪಾರ ಅವಶ್ಯಕತೆಯನ್ನು ಈ ಯಾವ ರಾಷ್ಟ್ರಗಳೂ ತುಂಬಿಕೊಡಲಾರವು. ಹೆಚ್ಚಿನ ಬಡ್ಡಿಗೆ ಅಂತರ್ರಾಷ್ಟ್ರೀಯ ಸಂಸ್ಥೆಯಿಂದಾಗಲಿ ಅಮೇರಿಕೆಯಿಂದಾಗಲಿ ಸಾಲತರಲು ಬ್ರಿಟನ್ನಿಗೆ ಮನಸ್ಸಿಲ್ಲ. ಬೆವಿನ್ನರ ಅಸಹಾಯ ಕೂಗಿನಂತೆ ಅಮೇರಿಕವೆಂದೂ ಪುಕ್ಕಟೆ ತನ್ನ ಚಿನ್ನವನ್ನು ಇಂಗ್ಲಂಡಿಗೆ ಕೊಟ್ಟು ಅದರ ಉತ್ಪಾದನ ಶಕ್ತಿಯನ್ನು ಹೆಚ್ಚು ಮಾಡಗೊಟ್ಟು ತನಗದೊಂದು ಪ್ರಬಲ ಪ್ರತಿಸ್ಪರ್ಧಿಯಾಗುವಂತೆ ಅನುಕೂಲ ಪಡಿಸಿ ಕೊಡಲಾರದು. ಇಂಡಿಯದಂತಹ ಆಶೋತ್ತರೇಚ್ಛು ದೇಶಗಳು ಕೇವಲ ನಿಸ್ವಾರ್ಥ ರೀತಿಯಿಂದ ಬ್ರಿಟನ್ನಿಗೆ ಸಹಾಯ ಕೊಡಲಾರವು ಆದುದರಿಂದ ಇಂಗ್ಲಂಡಿಗಿರುವ ಒಂದೇ ಒಂದು ಮಾರ್ಗವೆಂದರೆ "ಉದ್ಧರೇದಾತ್ಮನಾತ್ಮಾನಂ" ಎಂಬುದೇ ಆಗಿದೆ.

## ಲಂಡನ್ನಿನ ಮೇಲೆ ದಾಳಿ ಮಾಡುವ ಬೆದರಿಕೆ!

ಯೆಹೂದಿ ಕ್ರಾಂತಿಕಾರರು ಬ್ರಿಟನ್ನನ್ನು ಹಣಿಯಲು ತಮ್ಮ ಕೊನೆಯ ಅಸ್ತ್ರವಾದ ಲಂಡನ ನಗರದ ಮೇಲೆ ದಾಳಿ ಮಾಡುವ ಬೆದರಿಕೆ ಹಾಕಿದ್ದು ಎಲ್ಲೆಡೆ ಪ್ರಕಟವಾಗಿದೆಯಷ್ಟೆ. ಹಾಗೆ ಯೆಹೂದಿ ಕ್ರಾಂತಿಕಾರನೊಬ್ಬನು ದಾಳಿ ಮಾಡಲು ಹವಣಿಸಿ ಮಾರ್ಗದಲ್ಲಿ ಬಂಧಿತನಾದನೆಂಬ ಈ ಎಲ್ಲ ಸುದ್ದಿಯೂ ಸುಳ್ಳೆಂದು ಪ್ಯಾರಿಸಿನಲ್ಲಿ ಹೇಳಲಾಗುತ್ತಿದೆ.

ಕ್ರೂರ ದಾಳಿಗಾಗಿ ತಯಾರಿ ನಡೆಸಿದ ಅಂತಹ ಯೆಹೂದಿ ತಂಡವಿರುವುದು ನಿಜವಲ್ಲೆಂದೂ ಪಾಲಿಸ್ತಾನದ ರಾಜಕೀಯ ಕಾರ್ಯ ಸಮಿತಿಯ ಸಂಯುಕ್ತ ಅಧ್ಯಕ್ಷನಾದ ರಬ್ಬಿ ಕರೂಡ್ ಕಾರ್ಫನೊಬ್ಬನ ಪ್ರಯತ್ನವೇ ಅದಾಗಿತ್ತೆಂದೂ, ಅಲ್ಲದೆ ಅವನು ಹಸ್ತಪತ್ರವನ್ನು ಲಂಡನ್ನಿನ ಮೇಲೆ ಹಂಚಲೆಂದು ಮೊದಲು ಹೋಗಿತ್ತೆಂದು ಚೇಳಲಾದ ವಿಮಾನವನ್ನು ಪ್ರವೇಶಿಸುವಾಗ ಬಂಧಿಸಲ್ಪಟ್ಟನೆಂದೂ ಫ್ರೆಂಚರ ಅಭಿಪ್ರಾಯ.

ಯೆಹೂದಿ ರಾಷ್ಟ್ರೀಯ ಬಿಡುಗಡೆ ಸಮಿತಿಯ ವಕ್ತಾರನು ಮೇಲಿನದೊಂದು ಅದ್ಭುತವಾಗಿ ವರ್ಣಿಸಿದ ಚಮತ್ಕಾರ ಕಾರ್ಯವೆಂದೂ ಕ್ರಾಂತಿಕಾರಕ ಯೆಹೂದಿ ಪಂಗಡದ ಕಾರ್ಯವಲ್ಲೆಂದೂ ಹೇಳಿಕೆ ಕೊಟ್ಟಿದ್ದಾನೆ.

ಪಾಲಿಸ್ತಾನ ವಿಭಜನೆಯು ಸಂಯುಕ್ತ ರಾಷ್ಟ್ರಸಂಘದಲ್ಲಿ ರೂಪುಗೊಳ್ಳುತ್ತಿರುವಾಗ, ಬ್ರಿಟನ್ನಿನ ಮಂತ್ರಿಮಂಡಲ ಆ ಯೋಜನೆಯನ್ನು ಪರಿಶೀಲಿಸುವಲ್ಲಿ ಅಲ್ಲಿಯ ಪರರಾಷ್ಟ್ರದ ಮಂತ್ರಿ ಅರ್ನೆಸ್ಟ್ ಬೆವಿನ್ನರು ಅದನ್ನು ವಿರೋಧಿಸುವರೆಂಬ ಸುದ್ದಿ ಹರಡಿರುವಾಗ ಮತ್ತು ಅರಬ ಲೀಗು ಯಾವ ಕಾರಣದಿಂದಲೂ ಪಾಲಿಸ್ತಾನವಿಭಜನೆಯನ್ನೊಪ್ಪುವುದಿಲ್ಲವೆಂದು ಹೇಳಿಕೆಯುತ್ತಿರುವಾಗ ಮೇಲೆ ಹೇಳಿದಂತೆ ಯೆಹೂದಿಗಳು ಬ್ರಿಟಿಶರನ್ನು ಬೆದರಿಸಿ ಒಪ್ಪಿಸಲು ಹಂಚಿಕೆ ಹಾಕಿದ್ದರೆ ಆಶ್ಚರ್ಯವಲ್ಲ.

## ಚೀನದ ಪಾರತಂತ್ರ್ಯ

ಅಮೇರಿಕನ್ ಲೆಫ್ಟಿನೆಂಟ್ ಜನರಲ್ ಅಲ್ಬರ್ಟ್ ಸಿ. ವೆಡಿಮಿಯರನು ಚೀನದ ಕೊಮಿಂಟಾಂಗ ಆಡಳಿತದ ಪ್ರತಿಯೊಂದು ಶಾಖೆಯಲ್ಲೂ ಅಮೇರಿಕದ ಸಲಹೆಗಾರರಿರಬೇಕೆಂದೂ ಆ ಮೂಲಕ ಚೀನದಲ್ಲಿ ಅಮೇರಿಕದ ಸಾರ್ವಭೌಮತ್ವಕ್ಕೆ ಅಡಿಯಾಳಾದ ಗೊಂಬೆ ಸರಕಾರವನ್ನು ಸ್ಥಾಪಿಸಬೇಕೆಂದೂ ಪ್ರಚಾರ ನಡೆಸಿರುವನೆಂದು ಕೊಮಿಂಟಾಂಗ ಆಕಾಶವಾಣಿಯಲ್ಲಿ ಆಪಾದಿಸಲಾಯಿತು.

ಮೇಲಿನ ಆಪಾದನೆಯಲ್ಲಿ ಸತ್ಯಾಂಶವಿಲ್ಲದಿಲ್ಲ. ಚೀನೀ ಕಮ್ಯುನಿಷ್ಟರನ್ನು ಬಗ್ಗುಬಡಿಯಲು ಕೊಮಿಂಟಾಂಗ ನಾಯಕನಾದ ಚಿಯಾಂಗ ಕೈಶೇಕನು ಅಮೇರಿಕದಿಂದ ಶಸ್ತ್ರಾಸ್ತ್ರ, ಹಣಕಾಸು ಇತ್ಯಾದಿ ಸರ್ವವಿಧದ ಸಹಾಯವನ್ನೂ ಈ ವರೆಗೆ ಪಡೆಯುತ್ತ ಬಂದಿರುವುದೂ ಹಾಗೇ ಆತನ ಸರಕಾರ ಲಂಚ ವಂಚನ ಪ್ರಲೋಭನಾದಿಗಳಿಂದ ದಿನೇ ದಿನೇ ದುರ್ಬಲವಾಗುತ್ತ ಹೋಗಿರುವುದೂ ಜಗದ್ವಿದಿತವಾಗಿದೆ. ಈ ಪರಿಸ್ಥಿತಿಯಲ್ಲಿ ಅಮೇರಿಕ ಹೇಳಿದಂತೆ ಚಿಯಾಂಗ್ ಕೈಶೇಕನು ಕೇಳಬೇಕಾಗಿ ಬಂದಿದೆ. ಕೇಳದಿದ್ದರೆ ತನ್ನ ಸರಕಾರಕ್ಕೆ ತಲೆಯೆತ್ತದಂಥ ಸೋಲು ಖಂಡಿತ. ಅಮೇರಿಕ ಈ ಸುಸಂಧಿಯನ್ನು ದುರುಪಯೋಗಪಡಿಸಿಕೊಳ್ಳಲು ಹದ್ದಿನಂತೆ ಕಾದುಕೂತಿದೆ. ಮನೆಯವರ ಮೇಲಿನ ಸೇಡು ತೀರಿಸಿಕೊಳ್ಳಲು ಹೊರಗಿನವರನ್ನು ಕರೆದರೆ ಹೀಗಲ್ಲದೆ ಮತ್ತೆ ಹೇಗಾದೀತು.?

x x x

ಐವರಿಂದಕೂಡಿದ ಭಾರತದ ವ್ಯಾಪಾರ ಸಮಿತಿಯು ಟೋಕಿಯೋದಿಂದ ಹೊರಡಬೇಕಾಗಿದ್ದ ಕಾಲದಲ್ಲಿ ಹೊರಡಲಾಗಲಿಲ್ಲ. ಅದಕ್ಕೆ ಅವರ ವಿಮಾನವು ಪ್ರಥಮದಲ್ಲೇ ಹಾಳಾದುದು ಕಾರಣವೆಂದು ತಿಳಿದು ಬಂದಿದೆ. ಆ ಕಾರಣದಿಂದ ಅವರು ಹೊರಡುವ ಕಾಲವನ್ನು ಅನಿರ್ದಿಷ್ಟ ಅವಧಿಗೆ ಮುಂದುವರಿಸಲಾಗಿದೆ.

x x x

ಬಂಗಾರದ ಉತ್ಪಾದನೆಯನ್ನು ಹೆಚ್ಚಿಸುವುದರ ಸಲುವಾಗಿ ಆಸ್ಟ್ರೇಲಿಯದ ಸರಕಾರವು ಅದರ ಮೇಲಿನ ತೆರಿಗೆಯನ್ನು ತೆಗೆದು ಹಾಕಲು ನಿಶ್ಚಯಿಸಿದೆ. ಕೇವಲ ೫ ಲಕ್ಷ ಪೌಂಡುಗಳಷ್ಟು ಬರುವ ಆ ತೆರಿಗೆಯು ಉಕ್ತಲೋಹದ ಉತ್ಪಾದನೆಗೆ ಪ್ರೋತ್ಸಾಹದಾಯಕವಾಗಿಲ್ಲವೆಂದು ಉತ್ಪಾದಕರ ಅಭಿಪ್ರಾಯ.

x x x

ರಶಿಯವು ಒಂದು ದೊಡ್ಡ ಶಾಂತಿಪ್ರಿಯ ರಾಷ್ಟ್ರವೆಂದು ವರ್ಣಿಸುತ್ತ, ಮುಖ್ಯ ಪ್ರಧಾನ ಜೋಸೆಫ್ ಸ್ಟಾಲಿನ್‌ರು ಮಾಸ್ಕೋದ ೮೦೦ ನೆಯ ವಾರ್ಷಿಕೋತ್ಸವದಲ್ಲಿ, ರೇಗಿಸುವುದು ಸಾಮ್ರಾಜ್ಯವಾದಿಗಳ ಮುಖ್ಯ ಸಾಧನವೆಂದೂ ಹಾಗೆ ರೇಗಿಸಿ ಯುದ್ಧ ಹೂಡುವಂತೆ ಮಾಡುವುದು ಅವರಿಗೆ ಲಾಭದಾಯಕವೆಂದೂ ಅಭಿಪ್ರಾಯಪಟ್ಟರು. ೬೦೦ ಶಬ್ದಗಳಿಂದ ಸೋವಿಯಟ್ ರಾಜಧಾನಿಯಾದ ಮಾಸ್ಕೋವನ್ನು ಅವರು ಪ್ರಶಂಸಿಸಿ ಅದರ ಬಾವುಟದ ಕೆಳಗೆ ಶಾಂತಿಪ್ರಿಯರು ಶಾಂತಿಯಿಂದ ಬಾಳಬಹುದೆಂದೂ ಅದು ಬಂಡವಾಲಶಹರ ಕೈಕೆಳಗೆ ನರಳುತ್ತಿರುವ ಮಾನವಕುಲದ ಪ್ರತಿಭಟನೆಯ ಮುಂಗುರುಹೆಂದೂ ಹೇಳಿದುದಾಗಿ ತಿಳಿಯುತ್ತದೆ.

# ಪಾಕಿಸ್ತಾನದ ಲಾಭ ಹಾನಿ ಪತ್ರ

ಪಾಕಿಸ್ತಾನವು ಸರ್ವ ವಿಧದಿಂದ ಅಶ್ಯವ ಹಾರ್ಯವೆಂದು ಬ್ರಿಟಿಶ ಮಂತ್ರಿತ್ರಯವು ಸಾರಿ ಹೇಳಿದ್ದರೂ ಭಾರತವು ಅಖಂಡವಾಗಿಯೆ ಉಳಿಯತಕ್ಕದ್ದು ಪಾಕಿಸ್ತಾನವನ್ನೆಂದಿಗೂ ಕೊಡಲಾರೆವೆಂದು ಸರದಾರ ಪಟೇಲರಂಥ ಮುಖಂಡರು ಗರ್ಜಿಸಿದ್ದರೂ ಬ್ಯಾ. ಜಿನ್ನಾರು ತಮ್ಮ ಹುರಾಗ್ರಹದಿಂದ ಪಾಕಿಸ್ತಾನವನ್ನು ಪಡೆದುಕೊಂಡೇಬಿಟ್ಟರು. ಬ್ಯಾ. ಜಿನ್ನಾರ ಕನಸಿನ ಪಾಕಿಸ್ತಾನಕ್ಕಿಂತ ಈಗ ಅವರಿಗೆ ದೊರೆತ ಪಾಕಿಸ್ತಾನವು ವಿಸ್ತಾರದಲ್ಲಿ ಚಿಕ್ಕದಾಗಿರಬಹುದು, ಆರ್ಥಿಕ ದೃಷ್ಟಿಯಿಂದ ದರಿದ್ರವಾಗಿರಬಹುದು. ಆದರೆ ಅವರು ಮಾತ್ರ ತಮ್ಮ ಧ್ಯೇಯಸಾಧನೆಯಲ್ಲಿ ಕೃತಕೃತ್ಯರಾಗಿರುವರೆಂದೇ ಹೇಳಬೇಕು. ಅಷ್ಟೇ ಅಲ್ಲ, ಅವರು ಪಾಕಿಸ್ತಾನದ ಗವರ್ನರ ಜನರಲ ಮತ್ತು ಪಾಕಿಸ್ತಾನ ಘಟನಾ ಸಮಿತಿಯ ಅಧ್ಯಕ್ಷಪದವನ್ನು ಅಲಂಕರಿಸಿ ಆ ರಾಷ್ಟ್ರದ ಪ್ರಧಾನ ಶಹಾರೆ ಆಗಿದ್ದಾರೆ. ಬ್ಯಾ. ಜಿನ್ನಾರ ಹೊಂಗನಸು ನನಸಾಯಿತು.

ಪಾಕಿಸ್ತಾನದ ಕಲ್ಪನೆಯ ಮೂಲವಾದರೂ ಬ್ರಿಟಿಶರ ಭೇದನೀತಿಯಲ್ಲದೆ ಇಪ್ಪತ್ತನೆ ಶತಮಾನದ ಪ್ರಾರಂಭದಿಂದಲೂ ಬ್ರಿಟಿಶರು ಮುಸ್ಲಿಂರನ್ನು ಎತ್ತಿ ಕಟ್ಟುವ ಧೋರಣೆ ವಹಿಸಿದರು. ಪಾಕಿಸ್ತಾನವೆಂದರೆ ಮುಸ್ಲಿಂರಿಗಾಗಿ ಪ್ರತ್ಯೇಕ ರಾಷ್ಟ್ರವೆಂದು ಈಗ ಹೇಳಬೇಕಾದರೆ ಕಾರಣವುಳಿದಿಲ್ಲ. ೧೯೩೦ ರಲ್ಲಿ ಕೆಂಬ್ರಿಜದಲ್ಲಿ ಕಲಿಯುತ್ತಿದ್ದ ಚೌಧರಿ ರಹಿಮತ ಆಲಿಯು ಪಾಕಿಸ್ತಾನದ ಕಲ್ಪನೆಗೆ ಒಂದು ಸ್ಪಷ್ಟ ರೂಪ ಕೊಟ್ಟು ಅದರಲ್ಲಿ ಪಂಜಾಬ, ಗಡಿನಾಡು, ಕಾಶ್ಮೀರ, ಸಿಂಧ, ಬಲುಚಿಸ್ತಾನಗಳು ಸೇರಬೇಕೆಂದು ಹೇಳಿದನು. ಅದೇ ವರ್ಷ ಭಾರತದಲ್ಲಿ ಸೇರಿದ್ದ ಲೀಗಿನ ವಾರ್ಷಿಕಾಧಿವೇಶನದಲ್ಲಿ ಸರ್ ಮಹಮ್ಮದ ಇಕ್ಬಾಲರು ಭಾರತದಲ್ಲಿ ಮುಸ್ಲಿಂರದೊಂದು ಕೇಂದ್ರ ಸರಕಾರವನ್ನು ಸ್ಥಾಪಿಸಿ ಪಂಜಾಬ, ಸಿಂಧ, ಗಡಿನಾಡುಗಳ ಅಧಿಪತ್ಯವನ್ನು ಅದಕ್ಕೆ ಒಪ್ಪಿಸಬೇಕೆಂದು ಹೇಳಿದರು. ಲಾರ್ಡ ಕರ್ಝನರು ಬಂಗಾಲದ ವಿಭಜನೆ ಸಾಧಿಸಿ ಹಿಂದೂ ಮುಸ್ಲಿಂರಲ್ಲಿ ಚಿರದ್ವೇಷವನ್ನು ಬಿತ್ತಲು ಪ್ರಯತ್ನಿಸಿ ನಿಷ್ಫಲರಾದರು.

## ಮುಸ್ಲಿಂ ಲೀಗಿನ ಹುಟ್ಟು

ಮುಸ್ಲಿಂರು ತಮ್ಮ ಲೀಗನ್ನು ಸ್ಥಾಪಿಸಿಕೊಂಡಿದ್ದರೂ ಈ ಮುಸ್ಲಿಂ ಬಾಂಧವರನ್ನು ಹೊರಗೆ ಹೋಗಗೊಡಬಾರದೆಂದು ಮೌಲಾನಾ ಅಝಾದ, ಡಾ. ಅನ್ಸಾರಿಯವರಂಥ ಉಜ್ವಲ ಕಾಂಗ್ರೆಸ್ಸಿಗರು ಲೀಗಿನ ಅಧ್ಯಕ್ಷರಾಗಿ ದುಡಿದರು. ಆದರೆ ಸಿರಿವಂತ ಜಮೀನದಾರರ ಸಂಸ್ಥೆಯಾದ ಲೀಗು ಜನರ ಹಿತವನ್ನು ಲೆಕ್ಕಿಸದೆ ಸ್ವಾರ್ಥಸಾಧನೆಯಲ್ಲಿಯೆ ನಿರತವಾದ್ದರಿಂದ ಕಾಂಗ್ರೆಸಿಗೂ ಅದಕ್ಕೂ ಕೂಡಿಬರಲಿಲ್ಲ. ಸ್ವಪ್ರತಿಷ್ಠಾಕಾಂಕ್ಷಿಯಾದ ಬ್ಯಾ. ಜಿನ್ನಾರು ಈ ಸಮಯವನ್ನು ಸಾಧಿಸಿ ಕಾಂಗ್ರೆಸಿನಿಂದ ಹೊರಬಿದ್ದು ಲೀಗನ್ನು ಸೇರಿದರು.

ಲೀಗಿನವರು ತಮ್ಮ ಬಲಾಬಲಗಳನ್ನು ಪರೀಕ್ಷಿಸಲು ೧೯೩೭ ರ ಚುನಾವಣೆಯಲ್ಲಿ ಭಾಗವಹಿಸಿದರು. ಅದರಲ್ಲಿ ಅವರಿಗೆ ಪುನಃ ತಲೆಯೆತ್ತಲು ಬರದಂಥ ಸೋಲು ಬಂದೊದಗಿತು. ಭಾರತದ ಹನ್ನೊಂದರಲ್ಲಿ ಏಳು ಪ್ರಾಂತಗಳಲ್ಲಿ ಕಾಂಗ್ರೆಸ ಮಂತ್ರಿಮಂಡಳಗಳು ಸ್ಥಾಪಿತವಾದವು. ಇದನ್ನು ಕಂಡು ಕಂಗೆಟ್ಟ ಲೀಗಿನವರು ಅಳಿದು ಹೋದ ತಮ್ಮ ಪ್ರತಿಷ್ಠೆಯನ್ನು ಪುನಃ ಸಂಪಾದಿಸಲು ದ್ವಿರಾಷ್ಟ್ರತತ್ವದ ಪ್ರಚಾರವನ್ನು ಪ್ರಾರಂಭಿಸಿದರು. ಎರಡು ಮೂರು ವರ್ಷಗಳ ವರೆಗೆ ಹೀಗೆ ಅಖಂಡ ಪ್ರಚಾರ ನಡೆಸಿ ೧೯೪೦ ರಲ್ಲಿ ಲಾಹೋರದಲ್ಲಿ ಸೇರಿದ್ದ ಮುಸ್ಲಿಂಲೀಗ ಅಧಿವೇಶನದಲ್ಲಿ ಪಾಕಿಸ್ತಾನದ ಬಗ್ಗೆ ಒಂದು ಗೊತ್ತುವಳಿಯನ್ನು ಅಂಗೀಕರಿಸಿದರು. ಪಾಕಿಸ್ತಾನದ ಬಗ್ಗೆ ಅನಂತರ ನಡೆದ ಎಲ್ಲ ಆಂದೋಲನಗಳಿಗೆ ಲಾಹೋರದ ಈ ಗೊತ್ತುವಳಿಯೆ ಆಧಾರವಾಗಿದೆ. ಸಿಕಂದರ, ಡಾ. ಲತೀಫ, ಡಾ. ಅಂಬೇಡಕರ, ಡಾ. ಪಂಜಾಬಿ ಮೊದಲಾದವರು ಪಾಕಿಸ್ತಾನದ ಯೋಜನೆಗಳನ್ನು ರಚಿಸಿದ್ದರೂ ಲಾಹೋರದ ಗೊತ್ತುವಳಿಯು ಪಾಕಿಸ್ತಾನದ ಬೇಡಿಕೆಯ ಕಳ ...ಪ್ರಸಿದ್ಧಿಯಾಗಿದೆ. ಅದ್ದರಿಂದ ಇದರ ಮುಖ್ಯಾಂಶ... ... ಅರಿತುಕೊಳ್ಳುವದವಶ್ಯ.

## ಲಾಹೋರ ಗೊತ್ತುವಳಿ

“ ಭಾರತದ ಪೂರ್ವ ಮತ್ತು ಪಶ್ಚಿಮಗಳಲ್ಲಿ ಒಂದಕ್ಕೊಂದು ಹೊಂದಿಕೊಂಡಿರುವ ಮುಸ್ಲಿಂ ಬಹುಸಂಖ್ಯಾತ ಪ್ರಾಂತಗಳನ್ನು ಅವಶ್ಯಕ ಇದ್ದ ಬಾಪಟೆಗಳೊಂದಿಗೆ ಬೇರ್ಪಡಿಸಿ ಅವುಗಳನ್ನು ಸ್ವತಂತ್ರ ಸಾರ್ವಭೌಮ ಘಟಕಗಳೆಂದು ಸಾರಬೇಕು ಇದನ್ನೊಪ್ಪದ ರಾಜ್ಯಘಟನೆ ಮುಸ್ಲಿಂರಿಗೆ ಒಪ್ಪಿತವಿಲ್ಲ. ಧಾರ್ಮಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ವಿಷಯಗಳಲ್ಲಿ ಹಿಂದುಸ್ತಾನದಲ್ಲಿ ಮುಸ್ಲಿಂರಿಗೆ ದೊರೆಯುವ ಹಿತಸಂರಕ್ಷಣೆಗಳನ್ನೂ ಹಕ್ಕುಬಾಧ್ಯತೆಗಳನ್ನೂ ಪಾಕಿಸ್ತಾನದಲ್ಲಿಯ ಹಿಂದುಗಳಿಗೆ ಕೊಡಲಾಗುವದು”

ಲೇ:- ದ. ಲ. ಕೆರೂರ

ಅಖಂಡ ಭಾರತದಲ್ಲಿ ತಾವು ಮುಸ್ಲಿಂರು ಅಲ್ಪಸಂಖ್ಯಾಕರಾಗಿರುವದರಿಂದ ಅಲ್ಲಿಯ ಆಡಳಿತೆಯಲ್ಲಿ ಸದಾ ಹಿಂದುಗಳದೇ ಮೇಲುಗೈ ಆಗಿ ತಮ್ಮ ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಹಿತಸಂಬಂಧಗಳು ಹಾಳಾಗಿ ಹೋಗುವವು ಅದ್ದರಿಂದ ತಾವು ಸುಖವಾಗಿ ಬಾಳಬೇಕಾದರೆ ತಮಗೊಂದು ಪ್ರತ್ಯೇಕ ರಾಷ್ಟ್ರಬೇಕು ಎಂದು ಮುಸ್ಲಿಂ ಲೀಗಿನ ಅಧ್ಯಕ್ಷರಾದ ಬ್ಯಾ. ಜಿನ್ನಾರು ಹಟತೊಟ್ಟು ಅದನ್ನು ಸಾಧಿಸಿದರು.

## ಪಾಕಿಸ್ತಾನದ ಸ್ವರೂಪ

ಪಾಕಿಸ್ತಾನದಲ್ಲಿ ಯಾವ ಯಾವ ಪ್ರದೇಶಗಳು ಸೇರಬೇಕು ಎಂಬ ಬಗ್ಗೆ ಈ ಮೊದಲು ಅನೇಕರು ರಚಿಸಿದ ಯೋಜನೆಗಳನ್ನು ಈಗ ವಿವೇಚಿಸಬೇಕಾಗಿಲ್ಲ. ಪಾಕಿಸ್ತಾನವೀಗ ಸ್ಥಾಪಿತವಾಗಿದ್ದು ಅದರಲ್ಲಿ ಗಡಿನಾಡುಪ್ರಾಂತ, ಸಿಂಧ, ಪಶ್ಚಿಮ ಪಂಜಾಬ, ಪೂರ್ವಬಂಗಾಲಗಳು ಸೇರಿದ್ದಾಗಿದೆ. ಪಂಜಾಬ ಬಂಗಾಲ ಪ್ರಾಂತಗಳು ಇಡಿಯಾಗಿ ಪಾಕಿಸ್ತಾನಕ್ಕೆ ಸೇರಬೇಕೆಂದು ಮುಸ್ಲಿಂ ಲೀಗಿನವರು ಎಷ್ಟೆಷ್ಟೊ ಅತ್ಯಾಚಾರಗಳನ್ನು ನಡೆಸಿದರು. ಆದರೆ ಆ ಪ್ರಾಂತಗಳಲ್ಲಿಯ ಹಿಂದುಗಳು ತಮ್ಮ ಬಹುಸಂಖ್ಯೆಯುಳ್ಳ ಪ್ರದೇಶವನ್ನು ಬಿಡಿಸಿಕೊಂಡು ಪ್ರತ್ಯೇಕ ಪ್ರಾಂತಗಳನ್ನು ಕಟ್ಟಿಕೊಂಡರು. ಕಾಶ್ಮೀರ ಸಂಸ್ಥಾನವೂ ಬ್ಯಾ. ಜಿನ್ನಾರ ಕಟಾಕ್ಷಕ್ಕೆ ಪಾತ್ರವಾಗಿದೆ ಆದರೆ ಅಲ್ಲಿಯ ಮಹಾರಾಜರು ಯಾವ ಒಕ್ಕೂಟವನ್ನು ಸೇರಬೇಕೆಂಬ ಬಗ್ಗೆ ಇನ್ನೂ ಯಾವ ನಿರ್ಧಾರ ಮಾಡಿಲ್ಲ.

## ಪಾಕಿಸ್ತಾನದ ಆರ್ಥಿಕ ಪರಿಸ್ಥಿತಿ

ಬ್ಯಾ. ಜಿನ್ನಾರ ಈ ಕಲ್ಪನೆಯಲ್ಲಿಯ ಪಾಕಿಸ್ತಾನದಲ್ಲಿ ಪಂಜಾಬ, ಸಿಂಧ, ಗಡಿನಾಡು ಮತ್ತು ಬಂಗಾಲ ಈ ಪ್ರಾಂತಗಳೂ ಕಾಶ್ಮೀರ, ಹೈದರಾಬಾದ ಸಂಸ್ಥಾನಗಳೂ ಅಲ್ಲದೆ ಪಂಜಾಬದಲ್ಲಿಯ ಮುಸ್ಲಿಂ ಬಹುಸಂಖ್ಯಾಕ ಸಂಸ್ಥಾನಗಳೂ ಪೂರ್ವ ಪಶ್ಚಿಮ ಪಾಕಿಸ್ತಾನಗಳನ್ನು ಜೋಡಿಸುವ ಕೂಟಪಟ್ಟಿಯೂ ಸೇರಿದ್ದವು. ಆದರೆ ಈಗ ಹೊಸದಾಗಿ ರಚಿತವಾಗಿರುವ ಪಾಕಿಸ್ತಾನವು ಇದಕ್ಕಿಂತ ಚಿಕ್ಕದಿದೆಂದು ಸ್ಪಷ್ಟವಾಗಿ ಕಾಣುತ್ತದೆ. ಈ ಪಾಕಿಸ್ತಾನದಲ್ಲಿ ಗಡಿನಾಡು ಕೊರತೆಯ ಪ್ರಾಂತವಾಗಿದ್ದು ಉಳಿದ ಪ್ರಾಂತಗಳು ಉಳಿಕೆಯ ಪ್ರಾಂತಗಳೆಂದು ಕಂಡುಬಂದರೂ ಕೇಂದ್ರ ಸರಕಾರ ಉತ್ಪನ್ನವು ಬಹಳ ಕಡಿಮೆಯಾಗಿರುವದರಿಂದ ಪಾಕಿಸ್ತಾನದ ಆರ್ಥಿಕ ಪರಿಸ್ಥಿತಿ ಭದ್ರವಾಗಿಲ್ಲೆಂಬುದನ್ನು ಸಪ್ರು ಸಮಿತಿಯ ಸದಸ್ಯರಾಗಿದ್ದ ಸರ್ ಹೋಮಿ ಮೋದಿ ಮತ್ತು ಡಾ. ಜಾನ ಮಥಾಯರು ೧೯೪೫ ರಲ್ಲಿ ಸಿದ್ಧಮಾಡಿ ತೋರಿಸಿದ್ದಾರೆ. ಅವರು ಕೊಟ್ಟ ಅಂಕಿ ಸಂಖ್ಯೆಗಳ ಪ್ರಕಾರ ಪಾಕಿಸ್ತಾನದ ಪ್ರಾಂತಗಳ ಆಯವ್ಯಯಗಳಿಂತಿವೆ. ಈ ಅಂಕಿಗಳನ್ನೆಲ್ಲ ಅಷ್ಟು ಲಕ್ಷ ರೂ. ಗಳೆಂದು ಓದಬೇಕು.

| ಪ್ರಾಂತ | ಆಯ | ವ್ಯಯ | ಶಿಲ್ಕು |
|---|---|---|---|
| ಗಡಿನಾಡು | ೧೮೩ | ೧೮೭ | ೪ |
| ಪಂಜಾಬ | ೭೨೧ | ೭೦೮ | ೧೩ |
| ಸಿಂಧ | ೪೨೯ | ೪೦೫ | ೨೪ |
| ಬಂಗಾಲ | ೯೭೪ | ೯೩೨ | ೪೨ |
| ಅಂತೂ ಇಡೀ ಪಾಕಿಸ್ತಾನ | ೨೩೦೭ | ೨೨೩೨ | ೭೫ |

ಈ ಪ್ರಾಂತಗಳು ತಮ್ಮ ಆಡಳಿತೆಯನ್ನು ಎಂತೊ ಏನೋ ಸಾಗಿಸಿಕೊಂಡುಹೋಗಬಲ್ಲವು. ಆವು ತಮ್ಮ ಆದಾಯದೊಳಗಿಂದ ಜನಹಿತ ಕಾರ್ಯವನ್ನು ಸಾಧಿಸಲಾರವು. ದೇಶದ ಪ್ರಗತಿಗೆ ಜನರ ಉತ್ಕರ್ಷ ಅಗತ್ಯ. ಜನಪದದ ಅಭಿವೃದ್ಧಿಗೆ ವ್ಯಾಪಾರೋದ್ಯೋಗಗಳು ಹೆಚ್ಚಬೇಕಾದುದು ಅನಿವಾರ್ಯ. ದೇಶದಲ್ಲಿ ಉದ್ಯೋಗಗಳು ಭರದಿಂದ ಹೆಚ್ಚಬೇಕಾದರೆ ಸರಕಾರದ ಪ್ರೋತ್ಸಾಹ ಇದ್ದೇತೀರಬೇಕು. ಅದ್ದರಿಂದ ಪಾಕಿಸ್ತಾನದಲ್ಲಿಯ ಜನರ ಸಮೃದ್ಧಿ ಹೆಚ್ಚಬೇಕಾದರೆ ಅಲ್ಲಿಯ ಸರಕಾರದ ಸಹಾಯದಿಂದ ಔದ್ಯೋಗಿಕಾಭಿವೃದ್ಧಿ ಭರದಿಂದ ನಡೆಯಬೇಕು. ಪ್ರಾಂತಗಳಂತೂ ಈ ಕಾರ್ಯದಲ್ಲಿ ಸಹಾಯ ನೀಡಲು ಅಸಮರ್ಥವಾಗಿವೆ. ಅಂದಮೇಲೆ ಕೇಂದ್ರ ಪಾಕಿಸ್ತಾನ ಸರಕಾರವು ಸಹಾಯ ಮಾಡಬೇಕು ಎಂಬ ಅಪೇಕ್ಷೆ ಇದ್ದಂತಾಯಿತು. ಆದರೆ ಇದು ಕೂಡ ಸಾಧ್ಯವಿಲ್ಲ. ಯಾಕೆಂದರೆ ಕೇಂದ್ರ ಸರಕಾರದ ಒಟ್ಟು ಉತ್ಪನ್ನವು ೧೭೫೨॥ ಲಕ್ಷ ರೂ. ಗಳಷ್ಟಿದ್ದು ವೆಚ್ಚವು ೯೩೩॥ ಲಕ್ಷ ರೂ. ಗಳಷ್ಟಿರುವದರಿಂದ ಪ್ರತಿವರ್ಷ ಸುಮಾರು ೮೧೯ ಲಕ್ಷ ರೂ. ಗಳು ಉಳಿತಾಯವಾಗುವವು. ವರ್ಷಕ್ಕೆ ೮ ಕೋಟಿ ರೂ. ಗಳ ಉಳಿತಾಯವಾದ ಮೇಲೆ ಹೆದರಬೇಕಾದ ಕಾರಣವಿಲ್ಲೆಂದು ಯಾರಾದರೂ ಅಜ್ಞರು ನುಡಿಯಬಹುದು. ಇಡೀ ರಾಷ್ಟ್ರದ ಜನರ ಸಮೃದ್ಧಿಗಾಗಿ, ಅವರ ಶಿಕ್ಷಣ ಪ್ರಗತಿಗಳಿಗಾಗಿ ಈ ಹಣವು ಒಂದು ತಿಂಗಳಿಗೆ ಕೂಡ ಸಾಲುವದಿಲ್ಲ. ಅಲ್ಲದೆ ಈ ಹಣವು ಕೂಡ ಕೇಂದ್ರ ಸರಕಾರಕ್ಕೆ ಉಳಿಯದೆ ಅದಿನ್ನೂ ಸಾಲ ಮಾಡಬೇಕಾಗುವ ಪರಿಸ್ಥಿತಿಯಿದೆಂಬುದನ್ನು ಮುಂದೆ ಕಂಡುಕೊಳ್ಳಬಹುದು.

## ತಲೆಭಾರದ ಸಂರಕ್ಷಣ ವೆಚ್ಚ

ಅಟಂಬಾಂಬಿನ ಇಂದಿನ ಯುಗದಲ್ಲಿ ಸ್ವಾತಂತ್ರ್ಯವು ಪ್ರತ್ಯೇಕವಾಗಿರದೆ ಪರಸ್ಪರಾವಲಂಬಿಯಾಗಿದೆ. ಯಾರ ಹಂಗಿನಲ್ಲಿಯೂ ನಾವಿರೆವು ಎಂದು ಹೇಳಲು ರಶಿಯಾದಂಥ ಬಲಾಢ್ಯ ರಾಷ್ಟ್ರಕ್ಕೂ ಸಾಧ್ಯವಿಲ್ಲೆಂದ ಬಳಿಕ ಬಡ ಪಾಕಿಸ್ತಾನದ ಪಾಡೇನು? ಅಖಂಡ ಭಾರತದ ಗಡಿಪ್ರದೇಶಗಳನ್ನು ರಕ್ಷಿಸುವುದಕ್ಕಾಗಿ ಬ್ರಿಟಿಶರು ಪ್ರತಿವರ್ಷ ೫೫ ಕೋಟಿ ರೂ. ಗಳನ್ನು ವೆಚ್ಚಮಾಡುತ್ತಿದ್ದರು. ಇದರಲ್ಲಿ ಅರ್ಧ ಹಣವು ವಾಯವ್ಯ ಗಡಿನಾಡನ್ನು ರಕ್ಷಿಸಲು ವೆಚ್ಚವಾಗುತ್ತಿತ್ತು. ಈಗ ಪಾಕಿಸ್ತಾನದಲ್ಲಿ ಸೇರಿದ ಚಿತಗಾಂಗ ಪ್ರದೇಶದಲ್ಲಿ ವೈರಿಗಳ ಆಕ್ರಮಣದ ಭಯವಿದೆಂದು ಮೊನ್ನಿನ ಜಾಗತಿಕ ಯುದ್ಧದಲ್ಲಿ ಕಂಡುಬಂದಿದೆ. ಅದ್ದರಿಂದ ಈ ಎರಡೂ ಗಡಿನಾಡುಗಳನ್ನು ರಕ್ಷಿಸಬೇಕಾದರೆ ಪಾಕಿಸ್ತಾನ ಸರಕಾರಕ್ಕೆ ಪ್ರತಿವರ್ಷ ೩೦ ಕೋಟಿ ರೂ. ಗಳು ಬೇಕಾಗುವವು. ಇದಲ್ಲದೆ ಸಮೀಪದ ದೊಡ್ಡ ರಾಷ್ಟ್ರವಾದ ಹಿಂದುಸ್ತಾನದ ಹೆದರಿಕೆಯನ್ನು ಕಳೆದುಕೊಳ್ಳಲು ಗಡಿಪ್ರದೇಶದಲ್ಲಿ ಅದ್ಭುತ ಸಿದ್ಧತೆಯನ್ನು ಆ ರಾಷ್ಟ್ರವು ಇಡಬೇಕಾದೀತು. ಈ ಎರಡೂ ರಾಷ್ಟ್ರಗಳ ನಡುವಿನ ಭೂಮಿಯು ಸಮಪ್ರದೇಶವಾದ್ದರಿಂದ ವ್ಯಾಜಿನೋದಂಥ ಸಂರಕ್ಷಣಾ ವ್ಯೂಹವನ್ನು ರಚಿಸಬೇಕಾದೀತು. ಸಂರಕ್ಷಣೆಯ ಈ ಭಾರದಿಂದ ಬಡ ಪಾಕಿಸ್ತಾನವು ಕುಸಿದು ಹೋಗಲಾರದೆ?

ಪಾಕಿಸ್ತಾನದ ಆರ್ಥಿಕಪರಿಸ್ಥಿತಿ ಈಗ ಸೂಕ್ಷ್ಮವಾಗಿದ್ದರೇನು, ಇನ್ನು ಮುಂದೆ ಉದ್ಯೋಗಾಭಿವೃದ್ಧಿ ನಡೆಸಿ ಅದನ್ನು ಸುಧಾರಿಸಿಕೊಳ್ಳಬಹುದಲ್ಲ ಎಂದು ವಾದಿಸುವದೂ ಸರಿಯಾಗಲಾರದು. ಹೆಚ್ಚಿಗೆ ಗಿರಣಿಗಳುಳ್ಳ ಬಂಗಾಲದ ಪ್ರದೇಶವೆಲ್ಲ ಈಗ ಹಿಂದುಸ್ತಾನಕ್ಕೆ ಸೇರಿ ಹೋಗಿದೆ. ಇಡೀ ಬಂಗಾಲದ ಸಮೃದ್ಧಿಯನ್ನು ಕಂಡೇ ಲೀಗಿನವರು ಅದನ್ನು ಕಬಳಿಸಬೇಕೆಂದಿದ್ದರು. ಆದರೆ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ. ಇನ್ನು ಸ್ವತಂತ್ರವಾಗಿ ಹೊಸ ಉದ್ಯೋಗಗಳನ್ನು ಪ್ರಾರಂಭಿಸಲು ಮತ್ತು ತನ್ಮೂಲಕ ದೇಶದ ಉತ್ಕರ್ಷವನ್ನು ಸಾಧಿಸಬೇಕಾದರೆ ದೇಶದಲ್ಲಿ ಖನಿಜ ಸಂಪತ್ತಾದರೂ ವಿಪುಲವಾಗಿರಬೇಕು. ವಿಧಿವಿಲಾಸವೆಂಬಂತೆ ಪಾಕಿಸ್ತಾನದ ನೆರೆಹೊರೆಯ ಪ್ರಾಂತಗಳಲ್ಲಿ ಖನಿಜ ಸಂಪತ್ತು ವಿಪುಲವಾಗಿದೆ ಹೊರತು ಪಾಕಿಸ್ತಾನದಲ್ಲಿ ಅದು ಕಾಣಬರುವದಿಲ್ಲ. ಅಲ್ಲಿಯೂ ಪಾಕಿಸ್ತಾನಕ್ಕೆ ನಿರಾಶೆಯೆ.

## ಹಟದಿಂದ ಮುಸ್ಲಿಂರು ಸಾಧಿಸಿದ್ದೇನು ?

ಅಂದಮೇಲೆ ಭಾರತದ ಭವ್ಯ ಸ್ವರೂಪವನ್ನು ವಿಕೃತಗೊಳಿಸಿ ದುರಾಗ್ರಹದಿಂದ ಪಾಕಿಸ್ತಾನವನ್ನು ಪಡೆದುಕೊಂಡ ನಮ್ಮ ಮುಸ್ಲಿಂ ಬಾಂಧವರು ಸಾಧಿಸಿದ್ದಾದರೂ ಏನು? ಎಂದು ಯಾರಾದರೂ ಕೇಳಬಹುದು. ಪಾಕಿಸ್ತಾನ ದೊರೆಯಿತು ಎಂಬ ಒಣ ಸಮಾಧಾನದ ಹೊರತು ಮುಸ್ಲಿಂರಿಗೆ ಬೇರೇನೂ ದೊರಕಿಲ್ಲೆಂದು ಖೇದದಿಂದ ಹೇಳಬೇಕಾಗುವದು. ಅಲ್ಪಸಂಖ್ಯಾಕರ ನೆವವನ್ನು ಮುಂದೆ ಮಾಡಿ ಪಾಕಿಸ್ತಾನವನ್ನು ಪಡೆದುಕೊಂಡವರು ಅಲ್ಪಸಂಖ್ಯಾಕರ ಪ್ರಶ್ನೆಯನ್ನೂ ಬಗೆಹರಿಸಲಿಲ್ಲ. ತಮ್ಮ ಒಟ್ಟು ಜನಸಂಖ್ಯೆಯ ಮೂರರಲ್ಲೊಂದು ಪಾಲನ್ನು ಹಿಂದುಸ್ತಾನದಲ್ಲಿ ಬಿಟ್ಟುಕೊಟ್ಟಿದ್ದಾರೆ. ಈಗ ಇವರನ್ನು ರಕ್ಷಿಸಲೆಂದು ಹಿಂದು-ಮುಸ್ಲಿಂರು ಪರಸ್ಪರ ಸೌಹಾರ್ದದಿಂದ ನಡೆದುಕೊಳ್ಳಬೇಕೆಂದು ಕೇಳಿಕೊಳ್ಳುತ್ತಿದ್ದಾರೆ. ಪಾಕಿಸ್ತಾನ ಘಟನಾಸಮಿತಿಯ ಅಧ್ಯಕ್ಷರಾದ ಬ್ಯಾ. ಜಿನ್ನಾರು ನಮ್ಮ ರಾಜ್ಯದಲ್ಲಿಯ ಅಲ್ಪಸಂಖ್ಯಾಕರಿಗೆ ಎಲ್ಲ ಹಕ್ಕು ಬಾಧ್ಯತೆಗಳನ್ನು ಕೊಡುತ್ತೇವೆ. ಯಾರೂ ಹೆದರಬೇಕಾಗಿಲ್ಲೆಂದು ಈಗ ಹೇಳಿದ್ದಾರೆ ಹಿಂದಕ್ಕೆ ಕಾಂಗ್ರೆಸಿನವರು ಇದೇ ಮಾತನ್ನು ಹೇಳಿದಾಗ ಒಪ್ಪದಿದ್ದ ಬ್ಯಾ. ಜಿನ್ನಾರ ಇಂದಿನ ಈ ನುಡಿಗಳನ್ನು ಅಲ್ಲಿಯ ಅಲ್ಪಸಂಖ್ಯಾಕರು ಹಿಂದು ಮುಂದು ಯೋಚಿಸದೆ ನಂಬುವದಾದರೂ ಎಂತು? ಪಾಕಿಸ್ತಾನದಲ್ಲಿಯ ನೂರಕ್ಕೆ ೩೦ರಷ್ಟಿರುವದರಿಂದ ಇವರನ್ನು ಕಡೆಗಣಿಸಲಿಕ್ಕೆ ಬಾರದು.

—೧೩ನೇ ಪುಟಕ್ಕೆ

## ದಿವಂಗತ ಮುದವೀಡು ಕೃಷ್ಣರಾಯರು



ಮರಣ ತಾ. ೭—೯—೧೯೪೭

೧

ಕರ್ಮವೀರರವೀ(?), ತಾ ದು
ಸ್ವಧರ್ಮಮೂಲ ಕುಠಾರ, ಕನ್ನಡ
ಧರ್ಮಕಲ್ಪದ್ರುಮ ಸಮೀರ,
ವಿದಗ್ಧ ಕಲ್ಹಾರ—
ನಮ್ಮ ನಾಡಿನ ಬಿಡುಗಡೆಯ ಕಂ
ಡೊಮ್ಮೆ ‘ಮುದವೀಡಾ’ಗಿ, ಕನ್ನಡ
ದಮ್ಮ ನಳುಮೊಗಕಂಡೊಡನೆ
ಮೇಹೊರಗಿದನೆ ಬುವಿಗೆ ?

೨

ಲೋಕಮೂರೊಂದಾಗಿ ಭಾವಿಸೆ
ಶೋಕಹತ ಹಿಂದೀಯರಾಂಗ್ಲಾ
ನೀಕವನ್ನಿದಿರಿಸುವವೊಲು
ಹುರುಪಿತ್ತ ಸೇನಾನಿ—
‘ಲೋಕಮಾನ್ಯ’ರ ಮಾನ್ಯತತ್ವವಿ
ವೇಕಕಾಹಳನಾಗಿ ಮೆರೆದವಿ
ವೇಕಿಗಳ ಬೆಚ್ಚಿಸಿದ ರಣಪಂ
ಡಿತನು ಗತಿಸಿದನೆ?

೩

ದಾಸಪಂಥದ ಭಕ್ತಿಬೇಕೆ ? ಮ
ಹಾಸಮುದ್ರದ ಭಾವಬೇಕೆ ? ಸ
ದಾಸದಿಚ್ಛೆಯ ಸತ್ವಸಾರೋ
ದ್ಧಾರ ಬಲಬೇಕೆ ?
ಹಾಸಭರ ಮುಖಮುದ್ರೆ ಬೇಕೆ ? ಕ
ವೀಶ ಸಹಜಸ್ಫೂರ್ತಿ ಬೇಕೆ ? ಆ
ದೇಸೆನಲಿ ಸದ್ಗುಣ ಕರಂಡಕ
ಕೃಷ್ಣರಾಯನಲಿ !

೪

ಕನ್ನಡದ ಕಲಿಯೆದಿರಿಸಲು ಬರು
ವನ್ನರಿಗೆ ಹೆಬ್ಬುಲಿ, ಬರಲು ಬೇ
ಕ್ವನ್ನರಿಗೆ ಕೋಯೆಂಬ ಬಲಿ—
ಬಲಭೀಮ ಶಕ್ತಿಯಲಿ
ಕನ್ನಡಕ್ಕೆರಡೆಸಗಲಿಚ್ಛಿಸು
ವನ್ನರನು ಸದೆಬಡಿದ ವೀರನ
ರೇಣ್ಯ ಮುಡಿದನೆ ? ಸಂಬೆ ಸಂಬೆ
ಯಿದೆಂಥ ವಾರ್ತೆಗಡ !

೫

ಮಾಣದಾ ಬಾಲ್ಗಂಗಾಧರ
ದ್ರೋಣಿಯಲಿ ಕಲ್ಪದ್ರುಮ ಮುಖ್ಯ
ಪ್ರಾಣದೇಹನು ಕೃಷ್ಣರಾಯನು
ಕನ್ನಡದ ಜನಕ—
ಕಾಣಲ್ಕೆ ಛಲದಂತಮಲ್ಲ, ಕೃ
ಪಾಣಪಾಣಿಗಳಗ್ರಗಣ್ಯ— ಧು
ರೀಣರೆಮ್ಮ ಕನ್ನಡದ ಗುಡಿ
ಯೇರಿಸುವ ದಿನವ !

—ಬ. ಹೆ. ಶ್ರೀಧರ

ಕರ್ಮವೀರ
ಹರಿಜನ ಪುರವಣಿ

# ಒಪ್ಪೊ ತಪ್ಪೊ?

(ಮೋ. ಕ. ಗಾಂಧಿ)

ನನ್ನ ಪತ್ರ ಸಮುದಾಯದಲ್ಲಿ ಗುಜರಾತಿಯಲ್ಲಿ ಒಬ್ಬರು ಬರೆದ ಪತ್ರವೊಂದಿದೆ. ಅದರ ಸಾರಾಂಶವನ್ನು ಕೆಳಗೆ ಕೊಟ್ಟಿದ್ದೇನೆ.

"೧೯೩೭ನೇ ಇಸವಿಯ ಸಪ್ಟಂಬರ ೧೬ನೇ ದಿನಾಂಕದ "ಯಂಗ ಇಂಡಿಯಾ"ದಲ್ಲಿ ವರದಿಯಾದ ನಿಮ್ಮ ಮದ್ರಾಸ ಭಾಷಣದಲ್ಲಿ ನಿಜವಾದ ಅರ್ಥಶಾಸ್ತ್ರಕ್ಕೆ ವಿರುದ್ಧವಾಗಿದ್ದುದು ಧರ್ಮವಲ್ಲ; ಮತ್ತು ಧರ್ಮಕ್ಕೆ ವಿಸಂಗತವಾಗುವ ಅರ್ಥಶಾಸ್ತ್ರವು ನಿಜವಾದ ಅರ್ಥಶಾಸ್ತ್ರವಲ್ಲ. ಆದುದರಿಂದ ಅದನ್ನು ತಿರಸ್ಕರಿಸಲೇ ಬೇಕು."

"ಅನೇಕ ವರ್ಷಗಳಿಂದ ನೀವು ಈ ಮತದವರುವುದೆಂದು ನಾನು ಬಲ್ಲೆ. ಆದರೆ ಅದು ಸರ್ವಸಮ್ಮತವಾಗಿಲ್ಲ. ಆದುದರಿಂದ ಧರ್ಮದ ಹೆಸರಿನಲ್ಲಿ ನಡೆದಿರುವ ಅತ್ಯಾಚಾರಗಳನ್ನು ಕಡಿಮೆ ಮಾಡುವಲ್ಲಿ ನೀವು ವ್ಯಯಿಸುವ ಕಾಲೋತ್ಸಾಹಗಳು ಯೋಗ್ಯವಲ್ಲೆಂದು ನನಗೆ ತೋರುತ್ತದೆ. ಎಲ್ಲಿದೆ ನಿಮ್ಮ ವಿಧಾಯಕ ಕಾರ್ಯಕ್ರಮವು ಇಂದು? ಹಿಂದುಸ್ತಾನದ ಶ್ರೇಷ್ಠ ಭಾಗದಲ್ಲಿ ರಾಷ್ಟ್ರೀಯ ಮಹಾ ಸಭೆಯ ಕೈಯಲ್ಲಿ ಪ್ರಭುತ್ವಸೂತ್ರಗಳು ಬಂದಿವೆ. ಪೂರ್ಣ ರಾಜಕೀಯ ಸ್ವಾತಂತ್ರ್ಯವು ನಮ್ಮ ಕೈಯಲ್ಲಿ ಬಂದಿದೆ. ಬ್ರಿಟಿಶ ಸರಕಾರವು ಅಧಿಕಾರ ತ್ಯಾಗಮಾಡಿದೆ. ಇಂತಹ ಪ್ರಸಂಗದಲ್ಲಿ ನೀವು ವಿಧಾಯಕ ಕಾರ್ಯಕ್ರಮದ ಆಚರಣೆಯಲ್ಲಿ ನಿಮ್ಮ ಶಕ್ತ್ಯುತ್ಸಾಹಗಳನ್ನು ವಿನಿಯೋಗಿಸಿ ಅದರ ಮುಖಾಂತರ ಧರ್ಮ ಮತ್ತು ಅರ್ಥಶಾಸ್ತ್ರವು ಪರಸ್ಪರ ವಿರೋಧಕಗಳಲ್ಲೆಂಬುದನ್ನು ತೋರಿಸಿಕೊಡುವುದು ಬೇಕಲ್ಲವೆ? ... ... ... ...ಹಿಂದುಸ್ತಾನದ ನೀತಿಗೆಟ್ಟ ಅರ್ಥಶಾಸ್ತ್ರದ ಬಗೆಗೆ ನೀವೇನೂ ಬರೆಯುವದಿಲ್ಲ. ಅದರಿಂದ ಕಾಂಗ್ರೆಸ ಸರಕಾರದ ಸದ್ಯದ ಆರ್ಥಿಕ ಧೋರಣಕ್ಕೆ ನಿಮ್ಮ ಬೆಂಬಲವಿದೆಂದು ಶ್ರದ್ಧಾವಂತರಿಗೆ ಅನಿಸಹತ್ತಿದೆ. ವಿಧಾಯಕ ಕಾರ್ಯಕ್ರಮದ ಜನಕರಾದ ನೀವೇ ಅದನ್ನೂ ನಾಶಮಾಡುತ್ತಿರುವಿರೆಂದು ನನಗನಿಸಕೊಡಗಿದೆ. ನೈಜ ಅರ್ಥಶಾಸ್ತ್ರಾವಲಂಬಿಯಾದ ಹಾಗು ಸ್ವಾವಲಂಬನ ತತ್ವಾನುವರ್ತಿಯಾದ ಒಂದಾದರೂ ಸಂಸ್ಥೆ ಖಾದಿಯ ಇಲ್ಲವೆ ಗ್ರಾಮೋದ್ಯೋಗಗಳ ಬಗೆಗೆ ನನಗೆ ತಿಳಿದ ಮಟ್ಟಿಗೆ ಇಲ್ಲ."

ಈ ಲೇಖಕನು ಉದ್ರೇಕದ ಕ್ಷಣದಲ್ಲಿ ಇದನ್ನು ಬರೆದಿರುವನು. ಆದುದರಿಂದ ಸಂಪೂರ್ಣ ಸತ್ಯವನ್ನು ವ್ಯಕ್ತಪಡಿಸಲು ಅವನಿಂದಾಗಿಲ್ಲ. ಜಾತೀಯ ಐಕ್ಯವು ನನ್ನ ಜೀವನದ ಜೀವಾಳ. ಖಾದಿ ಮತ್ತು ಗ್ರಾಮೋದ್ಯೋಗಗಳು ನನ್ನ ಬಗೆಯಲ್ಲಿ ಮೂಡುವ ಮುನ್ನವೇ ಅದು ಹಾಗಿತ್ತು. ಜಾತೀಯ ಐಕ್ಯದ ಆವೇಶ ನನ್ನಲ್ಲಾದಾಗ ನಾನು ೧೨ ವರ್ಷದ ಬಾಲಕನಾಗಿದ್ದೆ. ಆಂಗ್ಲಭಾಷಾಭ್ಯಾಸ ಅದೇ ಆರಂಭವಾಗಿದ್ದಿತು. ಎಲ್ಲ ಹಿಂದುಗಳು ಮುಸಲಮಾನರು ಮತ್ತು ಪಾರ್ಸಿಗಳು ಒಂದೇ ಮಣ್ಣಿನ ಮಕ್ಕಳು; ಆದುದರಿಂದ ಎಲ್ಲರೂ ಭ್ರಾತೃಭಾವಬದ್ಧರೆಂದು ನನಗೆ ಹೊಳೆದಿದ್ದಿತು. ೧೮೮೫ರಲ್ಲಿ ಕಾಂಗ್ರೆಸು ಹುಟ್ಟುವದಕ್ಕಿಂತ ಮೊದಲಿನದೀಮಾತು. ಇದಲ್ಲದೆ ಜಾತೀಯ ಐಕ್ಯವು ಕೂಡ ವಿಧಾಯಕ ಕಾಯಕ್ರಮದ ಒಂದು ಅಂತರ್ಭಾಗವೆಂಬುದನ್ನು ಮರೆಯಲಾಗದು. ಅದಕ್ಕಾಗಿ ನಾನೆಷ್ಟೋ ಗಂಡಾಂತರಗಳನ್ನೂ ಎದುರಿಸಿದ್ದೇನೆ. ಆ ಐಕ್ಯವು ಕೈಗೂಡದಿದ್ದರೆ ವಿಧಾಯಕ ಕಾರ್ಯಕ್ರಮವು ಮಹತ್ವದ ಪ್ರಗತಿಯನ್ನು ನನ್ನ ಕೈಯಿಂದಂತೂ ಹೊಂದಲಾರದೆಂದು ನನ್ನ ಮನವರಿಕೆಯಾಗಿದೆ. ಯಾಕೆಂದರೆ ಜಾತೀಯ ದಂಗೆಗಳಲ್ಲಿ ಅದನ್ನು ಹೇಗೆ ನಿರ್ವಹಿಸಬೇಕೆಂಬುದನ್ನು ನಾನರಿಯೆ. ನವಖಾಲಿ ಮತ್ತು ಬಿಹಾರಗಳಿಗೆ ನಾನು ಧಾವಿಸಿ ಹೋಗಬಾರದಿತ್ತೆಂಬುದೇ ಅವರ ಪ್ರತಿಪಾದನೆಯ ಮಥಿತಾರ್ಥ. ಯಾವ ಕೆಲಸವನ್ನು ಮಾಡುವ ರೀತಿ ನನಗೆ ಗೊತ್ತಿದೆಯೋ ಮತ್ತು ಅನೇಕ ವರ್ಷಗಳ ವರೆಗೆ ನಾನು ಯಾವುದನ್ನು ಮಾಡುತ್ತ ಬಂದಿರುವೆನೋ ಆ ಕೆಲಸವನ್ನು ಆಯತಹೊತ್ತಿಗೆ ಅಲಕ್ಷಿಸಬೇಕೆಂದೇ ಅದರ ಅರ್ಥ. ನಿಜವಾಗಿ ಇದು ನನ್ನಿಂದಾಗದ ಮಾತು. ವಿಧಾಯಕ ಕಾರ್ಯಕ್ರಮದ ಇತರ ಅಂಶಗಳ ಸಲುವಾಗಿ ಅದನ್ನು ಕಡೆಗಣಿಸುವದೆಂದರೆ ತಾತ್ಕಾಲಿಕ ಕರ್ತವ್ಯಚ್ಯುತಿಯೇ ಆಗುವದು. ನನ್ನ ಕೈಯಲ್ಲಿದ್ದುದನ್ನು ಬಿಟ್ಟು ಕರ್ತವ್ಯಚ್ಯುತಿಯನ್ನು ಮಾಡಿದುದಕ್ಕೆ ನನಗೇನೂ ದೊರೆಯದಂತಾಗುವದೇ ಅದರ ಒಟ್ಟು ಪರಿಣಾಮ.

ಕಾಂಗ್ರೆಸ ಸರಕಾರದ ಸೂತ್ರಧಾರಿಗಳು ನನ್ನ ಸಹಕಾರ್ಯಕರ್ತರಾಗಿರುವರು. ಕಾಂಗ್ರೆಸಿನಲ್ಲಿ ನನ್ನ ಜೊತೆಯಲ್ಲಿ ಅವರು ಊರ್ಜಿತರಾಗಿ ಉಚ್ಚ ಸ್ಥಾನಗಳನ್ನು ಸಂಪಾದಿಸಿರುವರೆಂದು ಹೇಳಲು ಶಕ್ಯವಿದೆ. ಪತ್ರಲೇಖಕನು ಉಲ್ಲೇಖಿಸಿದ ಅರ್ಥಶಾಸ್ತ್ರದ ಅರ್ಹತೆ, ಔಚಿತ್ಯಗಳ ಬಗೆಗೆ ಅವರನ್ನು ಮನಗಾಣಿಸುವಲ್ಲಿ ನಾನು ಯಶಸ್ವಿಯಾಗಿರದಿದ್ದರೆ ಇತರರನ್ನು ಎಂತು ನಾನು ಮನಗಾಣಿಸಬಹುದು? "ಖಾದಿ ಅರ್ಥಶಾಸ್ತ್ರ"ವೆಂದು ಸಂಗ್ರಹೀತವಾಗಿ ಹೇಳಬಹುದಾದ ಅರ್ಥಶಾಸ್ತ್ರದ ಆಚರಣೆಯಲ್ಲಿ ಮತ್ತು ಗ್ರಾಮೋದ್ಯೋಗಗಳ ಮುಖಾಂತರ ಹಿಂದುಸ್ತಾನದ ಹಳ್ಳಿಗಳನ್ನು ಪುನರ್ನವೀಕರಿಸುವ ವಿಷಯದಲ್ಲಿ ಹಿಂದುಸ್ತಾನದ ಜನರು ತಮ್ಮನ್ನು ಹಿಂಬಾಲಿಸಬಹುದೆಂದು ಅವರಿಗನಿಸುವದಿಲ್ಲ.

ಸರಕಾರದ ಸೂತ್ರಗಳನ್ನು ಶ್ರೀ ಜಾಜೂಜಿ, ಶ್ರೀ ಕುಮಾರಪ್ಪ ಮತ್ತು ಅವರಂತಹರು ತಮ್ಮ ಕೈಯಲ್ಲಿ ತೆಗೆದುಕೊಳ್ಳುವಂತೆ ಅವರನ್ನು ನಾನು ಸಿದ್ಧಮಾಡಬೇಕೆಂದು ಪತ್ರಲೇಖಕನ ಧ್ವನಿಯಿದೆ. ಇದೆಂತಹ ಹಳವಂಡ? ಜನರನ್ನು ಈ ರೀತಿ ಸಿದ್ಧಪಡಿಸಲು ನನಗೇನಧಿಕಾರವಿದೆ? ಎಷ್ಟೇ ದೊಡ್ಡ ಮನುಷ್ಯನಿದ್ದರೂ ಒಬ್ಬನ ಆದೇಶದ ಪ್ರಕಾರ ಜನತೆಯ ರಾಜ್ಯ, ಜನತೆಯಿಂದ ರಾಜ್ಯ, ಜನತೆಯ ಸಲುವಾಗಿರುವ ರಾಜ್ಯವನ್ನು ನಡೆಸಲಿಕ್ಕಾಗದು. ಸರಕಾರದ ಕಡಿವಾಣಗಳನ್ನು ಈಗ ಹಿಡಿದಿರುವವರಿಗಿಂತ ಬೇರೆಯವರಾರು ಹೆಚ್ಚು ಸಮರ್ಥರು ಹಾಗು ಸೂಕ್ಷ್ಮದೃಷ್ಟಿಯುಳ್ಳವರಿರುವರು? ಹೆಚ್ಚಿನ ಸಮರ್ಥರಾರಾದರೂ ಬಂದರೆ ಅವರು ಅಂತಹರಿಗೆ ಎಡೆಗೊಡುವರೆಂದು ನನ್ನ ಮನವರಿಕೆಯಾಗಿದೆ. ನನಗೆ ಗೊತ್ತಿದ್ದ ಮಟ್ಟಿಗೆ ಅವರು ಅಧಿಕಾರಸ್ಥಳಲೋಭಿಗಳಲ್ಲ. ಆದುದರಿಂದ ಬೇರೆಯವರಿಂದ ಹೇಳಿಸಿಕೊಳ್ಳದೆ ಸ್ವಯಂಪ್ರೇರಣೆಯಿಂದ ಸಮರ್ಥರಾದವರಿಗೆ ಸ್ಥಳವನ್ನು ಕೊಟ್ಟು ತಮಗೆ ದೊರೆತ ವಿಶ್ರಾಂತಿಯ ಬಗೆಗೆ ಅವರಿಗೆ ಋಣಿಯಾಗುವರು.

ಅವರಲ್ಲಿ ಯಾರೊಬ್ಬರನ್ನು ನಾನು ಸ್ಥಾನಚ್ಯುತಗೊಳಿಸಬಲ್ಲೆನೆಂಬ ತಪ್ಪು ಗ್ರಹಿಕೆಯನ್ನು ಯಾರೂ ಮಾಡಿಕೊಳ್ಳಬಾರದು. ಹೊಣೆಯ ಹೊರೆಯನ್ನು ಹೊರಲು ನಾನು ಸಿದ್ಧನಿದ್ದರೆ ಅವರು ನನ್ನನ್ನು ಸ್ವಾಗತಿಸುವರೆಂಬುದನ್ನು ನಾನು ಬಲ್ಲೆ, ಆದರೆ ನನ್ನಲ್ಲಿ ನಿಸ್ಸೀಮ ಸಾಮರ್ಥ್ಯವಿಲ್ಲೆಂಬುದನ್ನು ನಾನು ಒಪ್ಪಿಕೊಳ್ಳಲೇಬೇಕು. 'ರಾಮ'ನೆಂದು ಸಂಭೋಧಿಸುವಲ್ಲಿ ನಾನು ಆನಂದ ಪಡುತ್ತಿರುವ ಆ ದೇವರಲ್ಲಿಮಾತ್ರ ಅದುಉಂಟು. ಆದರೆ ನಾನು ಆತನ ನಮ್ರ ಭಕ್ತನು ಮಾತ್ರ. ಆತನ ಭಕ್ತರು ಆತನೇ ಎಂದೂ ಆಗಲಾರರು. ಆತನ ತಾಳಕ್ಕೆ ಸರಿಯಾಗಿ ಕುಣಿವ ಸೂತ್ರದ ಗೊಂಬೆಗಳವರು.

ನಾನು ಪ್ರಯತ್ನಿಸುತ್ತಿರುವ ಜಾತೀಯ ಐಕ್ಯಕ್ಕೆ ಅವರಾದರೂ ತಮ್ಮ ಕಾಲ, ಉತ್ಸಾಹಗಳ ಶ್ರೇಷ್ಠ ಭಾಗವನ್ನು ವಿನಿಯೋಗಿಸುತ್ತಿರುವರೆಂಬುದು ಲಕ್ಷಿಸತಕ್ಕ ಸಂಗತಿ. ನನಗೆ ತಿಳಿದಂತೆ ನಾನು, ಅವರಿಗೆ ತಿಳಿದಂತೆ ಅವರು. ಯಾಕೆಂದರೆ ಈ ಪ್ರಶ್ನೆ ಸಮಾಧಾನಕರವಾಗಿ ಬಿಟ್ಟಹೊರತು ಮತ್ತು ಶಾಂತಿಯ ರಾಜ್ಯವು ಹಿಂದುಸ್ತಾನದಲ್ಲಿ ಸ್ಥಾಪಿತವಾದ ಹೊರತು ರಾಷ್ಟ್ರ ರಚನೆಯ ಕೆಲಸಗಳು ಪ್ರಗತಿ ಹೊಂದಲಾರವೆಂದು ಅವರೂ ನಂಬಿರುವರು.

ಕೊನೆಯದಾಗಿ, ವಿಧಾಯಕ ಕಾರ್ಯಕ್ರಮದ ಉಪಯೋಗವೇನಾದರೂ ಆಗಬೇಕಿದ್ದರೆ ಹಿಂದುಸ್ತಾನದ ಅಸಂಖ್ಯ ಜನರು ಅದನ್ನು ಕೃತಿಯಲ್ಲಿ ಇಳಿಸಬೇಕೆಂಬುದನ್ನು ನನ್ನ ಪತ್ರಲೇಖಕನಂತೆ ವಿಚಾರವುಳ್ಳವರೆಲ್ಲರೂ ಅರಿತುಕೊಳ್ಳಬೇಕು. ಅದಕ್ಕೋಸುಗ ಸಾವಿರಾರು ಕೆಲಸಗಾರರು ನಮಗೆ ಬೇಕು. ಒಂದೇ ದಿವಸ ಇದನ್ನು ಮೊದಲು ಕಲ್ಪಿಸಿತೆಂಬ ಮಾತು ನಿಷ್ಪ್ರಯೋಜಕ. ಅನೇಕ ವರ್ಷಗಳ ವರೆಗೆ ಇದು ದೇಶದ ಮುಂದಿದೆ. ಅ. ಭಾ. ಚ. ಸಂಘ, ಗ್ರಾಮೋದ್ಯೋಗ ಸಂಘ, ಗೋ ಸೇವಾ ಸಂಘ, ತಾಲಿಮಿ ಸಂಘ, ಹಿಂದುಸ್ತಾನಿ ಪ್ರಚಾರ ಸಭೆ, ಆದಿವಾಸಿ ಸೇವಾ ಸಂಘ, ಹರಿಜನ ಸೇವಕ ಸಂಘ ಮತ್ತು ಇನ್ನೂ ಮರೆತುಳಿದಿರುವ ಇಂತಹ ಇತರ ಸಂಘಗಳು ಇದಕ್ಕೋಸುಗವೇ ಅಸ್ತಿತ್ವದಲ್ಲಿ ಬಂದವು. ಮತ್ತು ತಮ್ಮ ಶಕ್ತಿಗನುಗುಣವಾಗಿ ಅವು ಇನ್ನೂ ಕೆಲಸ ಮಾಡುತ್ತಿವೆ. ಧರ್ಮಾರ್ಥಗಳ ಪರಸ್ಪರ ಸಂಬಂಧದ ಸೌಂದರ್ಯಾವಶ್ಯಕತೆಗಳನ್ನು ಅವುಗಳೆಲ್ಲ ಕಂಡುಕೊಂಡಿವೆ. ಜಾತೀಯ ಐಕ್ಯದ ಕಾರ್ಯವನ್ನು ನಾನು ಮಾಡುತಿರುವಾಗ ಇತರ ವಿಧಾಯಕ ಕಾರ್ಯಗಳಲ್ಲಿಯ ನನ್ನ ಆಸಕ್ತಿಯು ತಗ್ಗಿಲ್ಲ. ನನಗೆ ಶಕ್ಯವಾದಾಗಲೆಲ್ಲ ಅವರ ಚರ್ಚೆಗಳ ಲ್ಲಿಯೂ ಭಾಗವಹಿಸುತ್ತೇನೆ. ನನ್ನಿಂದಾದ್ದಕ್ಕಿಂತ ಹೆಚ್ಚಿನದೇನನ್ನೂ ಅಪೇಕ್ಷಿಸಬಾರದು. ಬೇರೊಂದರ ಬೆನ್ನುಹತ್ತುವ ಆಸೆಗಾಗಿ ಅಪಾಯಕ್ಕೆ ಬಲಿಯಾಗಿ ಕೈಯಲ್ಲಿದ್ದ ಕೆಲಸವನ್ನು ನಾನು ಬಿಟ್ಟುಕೊಡಲಾರೆ. ಆದುದರಿಂದ ಪತ್ರಲೇಖಕನು ನನಗಿತ್ತ ಎಚ್ಚರಿಕೆಯನ್ನು ಅವನೇ ನಿಜವಾಗಿ ಮನಸ್ಸಿಗೆ ಹಚ್ಚಿಕೊಳ್ಳಬೇಕು. ಮತ್ತು ಅವನಂತೆ ವಿಚಾರ ಮಾಡುವ ಇನ್ನಿತರರೂ ಮನಃಪೂರ್ವಕವಾಗಿ ರಾಷ್ಟ್ರಸೇವೆಗೆ ತೊಡಗಬೇಕು.

ರಾಷ್ಟ್ರೀಯ ಕಾಯಕ್ಕೆ ಕಾರ್ಯಕರ್ತರಿಗೆ ರಾಜಕೀಯ ಅಧಿಕಾರವಿರುವದವಶ್ಯವಿಲ್ಲೆಂದು ಅಸಂಖ್ಯ ಸಲ ನಾನು ಹೇಳಿದ್ದೇನೆ. ಆದರೆ ಅಧಿಕಾರದಲ್ಲಿ ಯಾರನ್ನಿಡುವರೋ ಅವರ ಕೂಡ ಜನರು ಸಂಪರ್ಕವನ್ನಿಟ್ಟುಕೊಳ್ಳುವದು ಅವಶ್ಯ. ಇಂತಹರನ್ನು ಸಹಜವಾಗಿ ಎಣಿಸಬಹುದು. ಅಂತಹರು ಅತಿಸ್ವಲ್ಪ ಜನರಿರುವರು. ಆದರೆ ಜನರಿಗೆ ತಮ್ಮ ಅಧಿಕಾರದ ಜ್ಞಾನವಾಗಿ ಅದರ ಸದುಪಯೋಗವನ್ನು ಅವರು ಮಾಡಿಕೊಂಡರೆ ಎಲ್ಲವೂ ಸರಿಹೋಗುವದು. ನಮ್ಮ ಸ್ವಾತಂತ್ರ್ಯವು ಹದಿನೆಂಟು ದಿವಸಗಳ ಹಸುಗೂಸು, ತಂತಾನೆ ಎಲ್ಲ ಸರಿಯಾಗುವದೆಂದು ಭಾವಿಸುವದು ಅಸಾಧ್ಯ. ಇದಲ್ಲದೆ ಅಧಿಕಾರಸೂತ್ರಗಳನ್ನು ಹಿಡಿದವರು ಕೂಡ ಅಪಾರವಾದ ಆಡಳಿತದ ಕೆಲಸಕ್ಕೆ ಹೊಸಬರು. ಅದಕ್ಕೆ ಅವರು ಹೊಂದಿಕೊಳ್ಳಲು ಅವಿಶ್ರಾಂತ ಹೆಣಗುತಿರುವರು.

ಕಲಕತ್ತೆ ೬—೯—೪೭.

# ಗಾಂಧೀಜಿಯ ಪತ್ರಿಕಾ ಪ್ರಕಟನೆ

ಕಳೆದ ದಿನ ರಾತ್ರಿ ಕೆಲ ತರುಣರು ಪಟ್ಟಿಕಟ್ಟಿದ ಮನುಷ್ಯನೊಬ್ಬನನ್ನು ನಮ್ಮ ಆವಾರಕ್ಕೆ ಕರೆದುಕೊಂಡು ಬಂದರೆಂದು ವರದಿ ಮಾಡಲು ನನಗೆ ವಿಷಾದವೆನಿಸುತ್ತದೆ. ಕೆಲ ಮುಸಲ್ಮಾನರು ಅವನ ಮೇಲೆ ಹಲ್ಲೆ ಮಾಡಿದರೆಂದು ಹೇಳಲಾಗುತ್ತದೆ. ಮುಖ್ಯ ಮಂತ್ರಿಗಳು ಅವನ ಪರೀಕ್ಷೆ ಮಾಡಿದರು. ಅವನಿಗೆ ಇರಿತದ ಗಾಯಗಳು ಸಂಭವಿಸಿವೆಂದು ಹೇಳಲಾಗುತಿದ್ದಿತು. ಆದರೆ ಇರಿತದ ಗಾಯಗಳಿಲ್ಲೆಂದು ವರದಿಯಾಯಿತು. ಆದರೆ ಗಾಯಗಳು ಗಂಭೀರ ಸ್ವರೂಪದವೊ ಅಲ್ಲವೊ ಎಂಬುದು ಮಹತ್ವದ ಮುದ್ದೆಯಲ್ಲ. ಆದರೆ ಈ ತರುಣರು ತಾವೇ ನ್ಯಾಯಾಧೀಶರು ಮತ್ತು ವಧ್ಯಾಪುರುಷರಾಗಲು ಪ್ರಯತ್ನಿಸಿದ್ದನ್ನು ನಾನು ಒತ್ತಿ ಹೇಳಬಯಸುತ್ತೇನೆ.

ಈಗ ಕಲಕತ್ತೆಯ ವೇಳೆಯ ಪ್ರಕಾರ ರಾತ್ರಿ ೧೦ ಹೊಡೆದಿತ್ತು. ಅವರು ತಮ್ಮ ಗಂಟಲು ಹರಿದು ಬೀಳುವಂತೆ ಕೂಗುತಿದ್ದರು. ನನ್ನ ನಿದ್ದೆಗೆ ಭಂಗವುಂಟಾಯಿತು ಆದರೂ ಮುಂದಾಗುವದನ್ನು ತಿಳಿಯದೆ ಸ್ವಸ್ಥ ಮಲಗಲು ಪ್ರಯತ್ನಿಸಿದೆ. ಕಿಡಿಕಿ ಗಾಜುಗಳನ್ನು ಒಡೆದ ಸಪ್ಪಳ ಕೇಳಿದೆ. ನನ್ನ ಎರಡೂ ಪಕ್ಕಗಳಲ್ಲಿ ಇಬ್ಬರು ಶೂರ ಹುಡಿಗೆಯರು ಇದ್ದರು. ಅವರೂ ನಿದ್ರೆ ಹೋಗಲಿಲ್ಲ ಮತ್ತು ನನಗೆ ಗೊತ್ತಾಗದಂತೆ, ನನ್ನ ಕಣ್ಣುಗಳು ಮುಚ್ಚಿದ್ದವು, ಅವರು ಸಜ್ಜದೊಂದು ಗುಂಪಿನಲ್ಲಿ ಸೇರಿ ಅದನ್ನು ಸಮಾಧಾನಪಡಿಸಲು ಪ್ರಯತ್ನಿಸಿದರು. ಪರಮಾತ್ಮನ ಕೃಪೆಯಿಂದ ಜನಸಮೂಹವು ಅವರಿಗೆ ಯಾವ ಅಪಾಯವನ್ನೂ ಮಾಡಲಿಲ್ಲ. ಮನೆಯಲ್ಲಿ ಮುಸಲ್ಮಾನ ಮುದುಕಿಯು—ಪ್ರೀತಿಯಿಂದ ಅವಳಿಗೆ ಬೀಯಮ್ಮಾ ಎಂದು ಕರೆಯಲಾಗುತಿತ್ತು— ಮತ್ತು ಮುಸಲ್ಮಾನ ತರುಣನೊಬ್ಬನು ನನ್ನ ಚಾಪೆಯ ಹತ್ತಿರ ನಿಂತರು. ನನ್ನ ರಕ್ಷಣೆಗಾಗಿ ಎಂದು ನಾನು ತಿಳಿದುಕೊಂಡೆ.

ಗದ್ದಲ ಹೆಚ್ಚಾಗಹತ್ತಿತು. ಕೆಲವರು ನಡುಮನೆಯನ್ನು ಪ್ರವೇಶಿಸಿ ಅನೇಕ ಬಾಗಿಲುಗಳನ್ನು ಒಡೆದು ತೆಗೆಯಹತ್ತಿದರು. ನಾನು ಎದ್ದು ರೊಚ್ಚಿಗೆದ್ದ ಜನಸಮೂಹವನ್ನೆದುರಿಸಬೇಕೆಂದು ಬಯಸಿದೆ. ಒಂದು ಬಾಗಿಲಿನ ಹೊಸ್ತಿಲಿನ ಹತ್ತರ ನಿಂತುಕೊಂಡೆ. ಗುರುತಿನ ಮುಖಗಳು ನನ್ನನ್ನು ಸುತ್ತುಗಟ್ಟಿದವು ಮತ್ತು ನನ್ನನ್ನು ಮುಂದೆ ಹೋಗಗೊಡಲೊಲ್ಲವು. ಇಂಥ ಪ್ರಸಂಗದಲ್ಲಿ ಮೌನವನ್ನು ಬಿಟ್ಟುಗೊಡಲು ನನ್ನ ಮೌನವ್ರತ ಅವಕಾಶ ಕಲ್ಪಿಸಿಕೊಟ್ಟಿರುವದರಿಂದ ನಾನು ಮೌನವನ್ನು ಬಿಟ್ಟುಗೊಟ್ಟು ಶಾಂತರಾಗಿರೆಂದು ರೊಚ್ಚಿಗೆದ್ದ ಜನರನ್ನು ಸಂತೈಸಹತ್ತಿದೆ. ಬಂಗಾಲಿ ಮೊಮ್ಮಗಳಿಗೆ ನನ್ನ ಆ ಕೆಲ ಮಾತುಗಳನ್ನು ಬಂಗಾಲಿಯಲ್ಲಿ ಹೇಳಲು ಕೇಳಿಕೊಂಡೆ. ಅದೆಲ್ಲ ನಿರರ್ಥಕವಾಯಿತು. ಅವರ ಕಿವಿಗಳು ವಿವೇಕಕ್ಕೆ ಕಿವಿಗೊಡುವ ಸ್ಥಿತಿಯಲ್ಲಿರಲಿಲ್ಲ.

ನಾನು ಹಿಂದೂ ಪದ್ಧತಿಯಂತೆ ನನ್ನ ಕೈಗಳನ್ನು ಜೋಡಿಸಿದೆ. ಆದರೆ ಯಾವ ಪ್ರಯೋಜನವೂ ಆಗಲಿಲ್ಲ. ಹೆಚ್ಚೆಚ್ಚು ಕಿಡಿಕಿ ಗಾಜುಗಳು ಚೂರಾಗಹತ್ತಿದವು. ಸಮೂಹದಲ್ಲಿಯ ಗೆಳೆಯರು ಆ ಜನಸಮೂಹವನ್ನು ಸಮಾಧಾನಪಡಿಸಲು ಪ್ರಯತ್ನಿಸಿದರು. ಪೋಲೀಸ ಅಧಿಕಾರಿಗಳೂ ಇದ್ದರು. ಅವರು ತಮ್ಮ ಅಧಿಕಾರ ಪ್ರಯೋಗ ಮಾಡಲು ಪ್ರಯತ್ನಿಸದಿದ್ದುದು ಒಳಿತೆ ಆಯಿತು. ಅವರೂ ತಮ್ಮ ಕೈಗಳನ್ನು ಜೋಡಿಸಿ ಬಿನ್ನವಿಸಿಕೊಂಡರು. ಲಾಠೀ ಹೊಡೆತ ಸ್ವಲ್ಪದರಲ್ಲಿಯೇ ನನಗೆ ತಪ್ಪಿತು ಮತ್ತು ನನ್ನ ಸುತ್ತಲೂ ಇರುವವರಿಗಾರಿಗೂ ಪೆಟ್ಟು ಬೀಳಲಿಲ್ಲ. ನನ್ನ ಮೇಲೆ ಒಗೆಯಲ್ಪಟ್ಟ ಇಟ್ಟಂಗಿಯೊಂದು ಸಮೀಪದಲ್ಲಿ ನಿಂತಿದ್ದ ಮುಸಲ್ಮಾನ ಗೆಳೆಯನೊಬ್ಬನಿಗೆ ಬಡಿಯಿತು. ಆ ಇಬ್ಬರೂ ಹುಡುಗಿಯರು ನನ್ನನ್ನು ಬಿಟ್ಟು ಅಗಲಲಿಲ್ಲ. ಅಷ್ಟರಲ್ಲಿಯೆ ಪೋಲಿಸ ಸುಪರಿಂಟೆಂಡೆಂಟರು ಮತ್ತು ಅವರ ಕೈಕೆಳಗಿನ ಅಧಿಕಾರಿಗಳು ಒಳಗೆ ಬಂದರು. ಅವರೂ ಬಲಪ್ರಯೋಗ ಮಾಡಲಿಲ್ಲ. ಒಳಗೆ ಹೋಗಬೇಕೆಂದು ಅವರು ನನ್ನನ್ನು ಬಿನ್ನವಿಸಿಕೊಂಡರು. ಆ ಬಳಿಕವೆ ಆ ತರುಣರನ್ನು ಶಾಂತಗೊಳಿಸುವ ಅವಕಾಶ ತಮಗೆಲದು ಅವರ ಭಾವನೆ. ಕೆಲ ಸಮಯದ ನಂತರ ಜನಸಮ್ಮರ್ದ ಹೊರಟದ್ದು ಹೋಯಿತು.

ಆವಾರದ ಬಾಗಿಲಿನ ಹೊರಗೆ ಏನು ನಡೆಯ್ತಿತೆಂಬುದು ನನಗೆ ಗೊತ್ತಿಲ್ಲ. ಪೋಲೀಸರು ಜನಸಮೂಹವನ್ನು ಚದುರಿಸಲು ಅಶ್ರುವಾಯು ಪ್ರಯೋಗ ಮಾಡಬೇಕಾಯಿತೆಂದು ಮಾತ್ರ ನನಗೆ ಗೊತ್ತಾಯಿತು. ಅಷ್ಟರಲ್ಲಿಯೆ ಡಾ. ಪಿ. ಸಿ. ಘೋಷ, ಅನಂದ ಬಾಬೂ ಮತ್ತು ಡಾ. ನೃಪೇನರು ಒಳಗೆ ಬಂದು ಸ್ವಲ್ಪ ಹೊತ್ತು ಚರ್ಚಿಸಿ ನಂತರ ಹೊರಟು ಹೋದರು. ಸುದೈವದಿಂದ ಶಾಹೀದ ಸಾಹೇಬರು ನಾಳೆ ನೌಖಾಲಿಗೆ ಹೋಗಬೇಕೆಂದು ಮಾಡಿದ್ದರ ಕಾರ್ಯಕ್ರಮವನ್ನು ಸಿದ್ಧಪಡಿಸುವದಕ್ಕಾಗಿ ಮನೆಗೆ ಹೋಗಿದ್ದರು. ಮೇಲೆ ವಿವರಿಸಿದ ಶೋಚನೀಯ ಘಟನೆಯ ಪರಿಣಾಮ ಎಲ್ಲಿಯ ವರೆಗೆ ಮುಟ್ಟಬಹುದೆಂಬದನ್ನು ಯಾರೂ ಹೇಳುವದು ಸಾಧ್ಯವಿಲ್ಲದ್ದರಿಂದ ನವಖಾಲಿಗಾಗಿ ಕಲಕತ್ತೆಯನ್ನು ಬಿಡುವ ವಿಚಾರವನ್ನು ನಾನು ಮಾಡಲಿಲ್ಲ. ಈ ಘಟನೆಯಿಂದ ಕಲಿಯತಕ್ಕ ಪಾಠವಾವುದು? ಬಹಳ ಸ್ವಾರ್ಥತ್ಯಾಗ ಮಾಡಿ ಗಳಿಸಿದ ಸ್ವಾತಂತ್ರ್ಯವನ್ನು ಹಿಂದುಸ್ತಾನ ಉಳಿಸಿಕೊಳ್ಳಬೇಕಾಗಿದ್ದರೆ ಸ್ತ್ರೀ ಪುರುಷರೆಲ್ಲ ಸ್ವಚ್ಛಂದವೃತ್ತಿಯುಳ್ಳವರಾಗುವುದನ್ನು ಸಂಪೂರ್ಣವಾಗಿ ಮರೆತು ಬಿಡತಕ್ಕದ್ದು. ಮಾಡಿದ ಪ್ರಯತ್ನ ಅಲಕ್ಷ್ಯದಿಂದ ಮಾಡಿದ ಅನುಕರಣ ಮಾತ್ರ. ಮುಸಲ್ಮಾನರು ತಪ್ಪು ಮಾಡಿದರೆ ದೂರು ಹೇಳಿಕೊಳ್ಳುವವರು

—೧೦ನೇ ಪುಟಕ್ಕೆ

# ಕಲಕತ್ತದಲ್ಲಿ

ಸುಮಾರು ೩ ತಿಂಗಳ ಅವಧಿಯ ನಂತರ ಗಾಂಧೀಜಿಗೆ ನವಖಾಲಿಯಲ್ಲಿ ಬಳುತ್ತಿರುವ ಪರಿಸ್ಥಿತಿಯನ್ನು ತಿಳುಹಿ ಅವರ ಸಲಹೆಯನ್ನು ಪಡೆಯುವುದರ ಸಲುವಾಗಿ ನಾನು ನನ್ನ ಗೆಳೆಯ ಮತ್ತು ಸಹೋದ್ಯೋಗಿಯಾದ ಶ್ರೀ ಚಾರು ಭೂಷಣ ಚೌಧರಿಯವರೊಡನೆ ಕಲಕತ್ತ ನಗರ ಕ್ಕೆ ಐವಾನದಲ್ಲಿ ಬಂದಾಗ ಹಳೆಯ ಚಿರಪರಿಚಿತ ಮುಖಗಳನ್ನು ನೋಡುವದು ಮತ್ತು ಗಾಂಧೀಜಿಯ ಚಿರಪ್ರಾಕೃ ಸ್ವರವನ್ನು ಕೇಳುವ ಸೌಭಾಗ್ಯವೊ ದಗಿತ್ತು. ಕಲಕತ್ತವು ಜಾತೀಯ ಸೌಹಾರ್ದದ ಆನಂದದಿಂದ ಉಬ್ಬಿ ಹೋದಂತಿದ್ದರೂ ಅತ್ಯ ವಸ್ಥೆ ಅದಗಿದ ಅಸಹ್ಯವನ್ನು ಇಂಗಿತಜ್ಞತೆಯಿಂದ ತಿಳಿಯಬಲ್ಲ ಗಾಂಧೀಜಿಯ ಮನಸ್ಸು ಅಸ್ವಸ್ಥ ವಾಗಿಯೇ ಇತ್ತು. ಸ್ವಲ್ಪ ಹಿಂದೆ ಮುಂದೆ ನೋಡಿ ಕೊನೆಯಲ್ಲಿ ಪಂಜಾಬಿನಿಂದ ಬೆದರಿಕೆಯನ್ನು ಬಡಿದೆಬ್ಬಿಸುವಂತಹ ಸುದ್ದಿಗಳು ಸುರಿಯು ತ್ತಿದ್ದುದನ್ನು ಲೆಕ್ಕಿಸದೆ ನವಖಾಲಿಗೆ ಹೊರಡಲು ಅವರು ನಿರ್ಣಯಿಸಿದರು ತಮ್ಮ ಸುತ್ತಲಿನ ಗೆಳೆ ಯರನ್ನು ಕುರಿತು 'ನಾಳೆ ಬೆಳಗ್ಗೆ ಹೊರಡಲೊ ಇಲ್ಲವೆ ಸಾಧ್ಯವಿಲ್ಲೇ?' ಎಂದು ಕೇಳಿ ಅವರಿಂದ ನಾಡಿದ್ದೆಂಬ ಉತ್ತರವನ್ನು ಪಡೆದು ಆಗ ಹೊರ ಡುವ ನಿಶ್ಚಯ ಮಾಡಿದರು. ಅಂದು ಸಂಜೆ 'ಯಾನಿಶಾ ಸರ್ವಭೂತಾನಾಂ ತಸ್ಯಾಂ ಜಾಗ ರ್ತಿ ಸಂಯಮಿ' ಎಂಬಂತಿದ್ದ ಗಾಂಧೀಜಿ ಒಂದು ಎಚ್ಚರಿಕೆಯನ್ನು ಕೊಟ್ಟರು "ಈ ಸಂಜೆ ಯಲ್ಲಿ ನಡೆದ ಸಂಗತಿಗಳಿಂದ ನವಖಾಲಿಗೆ ಹೋಗಬೇಕೆಂದಿದ್ದ ನನ್ನ ಸ್ಥಿರ ಸಂಕಲ್ಪವು ಬಿದ್ದು ಹೋಯಿತು" ಎಂದು ಆ ರಾತ್ರಿ ನಾನು ಅವ ರನ್ನು ಕಾಣಹೋದಾಗ ಹೇಳಿದರು. "ಕಲಕ ತ್ತವು ಜ್ವಲಂ ಜ್ವಾಲಾಗ್ರಸ್ತವಾಗಿರುವಾಗ ನಾನು ನವಖಾಲಿಗೇ ಏಕೆ, ಎಲ್ಲಿಗೂ ಹೋಗಲಾರೆನು. ಇಂದಿನ ಘಟನೆಯು ನನ್ನ ಪಾಲಿಗೊಂದು ದುಃಶಕುನ ಮತ್ತು ದೇವರಿತ್ತ ಎಚ್ಚರಿಕೆ. ಸದ್ಯಃ ನನ್ನನ್ನು ಬಿಡು ನೀವೊಬ್ಬರೇ ನವಖಾಲಿಗೆ ಹೋಗ ಬೇಕು. ಯಾವದಾದರೂ ಕಾರಣದಿಂದ ನನ್ನ ಸಹೋದ್ಯೋಗಿಗಳಿಗೆ ಅಲ್ಲಿರಲು ಶಕ್ಯವಾಗದಿ ದ್ದರೆ ನಿಮ್ಮ ಮಧ್ಯದಲ್ಲಿ ನಾನು ಬಂದು ಸೇರಿ ಕೊಂಡೇ ತೀರುವೆನೆಂದು ನೀವು ಹೋಗಿ ನವಖಾ ಲಿಯ ಜನರಿಗೆ ತಿಳಿಸಿರಿ."

ಅನಂತರ ಪ್ರಸಂಗಾನುಸಾರ, ಆ ಕಲಹದಾ ವಾನಲವು ಎಲ್ಲೆಡೆ ಹಬ್ಬುತ್ತ ಹೋಯಿತೆಂದರೆ ತಮಗೆ ಉಪವಾಸದ ಹೊರತು ಬೇರೆಯ ವಿಕಲ್ಪ ವಿಲ್ಲವೆಂದು ಗಾಂಧೀಜಿ ಸೂಚಿಸಿದರು. "ನನ ಗಾಗಿ ಮತ್ತೊಂದು ಉಪವಾಸ ಕಾದು ಕುಳಿತಿದೆ ಯೆಂದು ನಾನು ಪದೇ ಪದೇ ಹೇಳುತ್ತಿರಲಿ ಲ್ಲವೆ?" ಮರುದಿನವು ಅವರ ಮೌನದ ದಿನ ವಾಗಿತ್ತು. ಕರ್ಣಕರ್ಕಶವಾರ್ತೆಗಳು ಕೇಳ ಬರುತ್ತಲೇ ಇದ್ದವು. ಉರಿಯಾರಿಸಲು ಏನು ಮಾಡಬೇಕೆಂಬುದನ್ನು ಕೇಳಲು ಅನೇಕ ಪ್ರತಿ ನಿಧಿ ಮಂಡಳಗಳು ಅವರನ್ನು ಕಾಣಲು ಬಂದು ಕುಳಿತಿದ್ದವು. "ದಂಗೆಗಾರರ ನಡುವೆ ಹೋಗಿ ಅವರ ಉನ್ಮತ್ತ ವರ್ತನೆಯನ್ನು ತಡೆಯಿರಿ, ಇಲ್ಲವೆ ಆ ಪ್ರಯತ್ನದಲ್ಲೇ ಮಡಿಯಿರಿ. ಅದರೆ ಸೋತಸುದ್ದಿಯನ್ನರುಹಲು ಜೀವಸಹಿತ ತಿರುಗಿ ಬರಬೇಡಿರಿ. ಮೇಲು ಮಟ್ಟದವರ ತ್ಯಾಗ ಬಲಿ ದಾನಗಳು ಈ ಸನ್ನಿವೇಶದಲ್ಲಿ ಅತ್ಯಗತ್ಯ. ದಿವಂ ಗತ ಗಣೇಶ ಶಂಕರ ವಿದ್ಯಾರ್ಥಿಯ ಅಪವಾ ದೋದಾಹರಣವನ್ನು ಕಿದರೆ ಇಲ್ಲಿಯ ವರೆಗೆ ಕಲಹಾಗ್ನಿ ಶಮನಕ್ಕೆ ಕೇವಲ ಸಾಮಾನ್ಯರೇ ಆಹುತಿಯಾಗಿದ್ದಾರೆ; ಅದು ಸಾಲದು."

ಈ ಮಾತುಗಳನ್ನು ಹೇಳುತ್ತಿರುವಾಗಲೇ ಅವರಿಗೆ ತೋರಿಸುತ್ತಿರುವ ಚಿತ್ರದಲ್ಲಿ ಎಲ್ಲಿಯ ವರೆಗೆ ತಾವು ಬಂದೆವೆಂದು ಗಾಂಧೀಜಿ ಆಲೋಚಿ ಸುತಿದ್ದರು. ಏಕೆಂದರೆ ಅವರು ಮುಂಬರಿಸಿದರು, "ಅವರಿಗೆ ಮಾಡಿರೆಂಬುದನ್ನು ನಾನು ನಿಜ ವಾಗಿಯೂ ಇಂದು ಮಾಡಲಾರೆದು. ನನಗೆ ಅಪ್ಪಣೆಯೇ ದೊರೆಯದು. ನಾನದನ್ನು ಪಿನ್ನೆ ನೋಡಿದೆ. ಉನ್ಮತ್ತ ಜನವೃಂದದ ಮಧ್ಯ ದಲ್ಲಿ ನಾನು ಹೋದಾಗ ಪ್ರತಿಯೊಂದುದಿನವೂ ನನ್ನನ್ನು ಅಪಾಯದಿಂದ, ಕೇಡಿನಿಂದ ಉಳಿಸು ವುದು. ನಾನು ಬರಿಯ ದೈಹಿಕ ಆಯಾಸದಿಂದ ಕುಸಿದು ಬಿದ್ದೇನು, ಅದು ಮಹತ್ವದ್ದಲ್ಲ. ಸಮು ರದ ನಡುವೆ ಯೋಧನು ಆಯಾಸಕ್ಕೆ ಗುರಿಯಾ ಗಕೂಡದು" ಅದರೆ ಬಿಕ್ಕಟ್ಟಿನಲ್ಲಿ ನಿಷ್ಕ್ರಿಯ ವಾಗಿರುವುದು ಗಾಂಧೀಜಿಯ ಸ್ವಭಾವದಲ್ಲಿಲ್ಲ. ಅರಿತ್ತೆ ಅವರನ್ನು ಅವರ ಹಳೆಯ ಪ್ರಿಯಮಿ ತ್ರರೊಬ್ಬರು ಕಂಡಾಗ ಅವರ ಅಭಿಪ್ರಾಯವಾ ಗಾಗಲೇ ದೃಢಗೊಟ್ಟಿತ್ತು. "ನೀವು ಆಲೋಚಿಸಿ ರುವ ಮಾರ್ಗವನ್ನು ನಾನು ಒಪ್ಪಬೇಕೆಂದು ನೀವು ನಿರೀಕ್ಷಿಸಕೂಡದು" ಎಂದು ಆ ಹಳೆಯ ಗೆಳೆಯರು ತಮ್ಮ ರೂಢಿಯ ಮಿತ್ರಸಹಜ ಪ್ರೀತಿಯಿಂದ, ಗಾಂಧೀಜಿ ತಾವು ಉಪವಾಸ ಮಾಡಲು ನಿಶ್ಚಯಿಸಿರುವದರ ಕಾರಣಗಳನ್ನೊಳ ಗೊಂಡ ಹೇಳಿಕೆಯನ್ನು ಬರೆದಿಟ್ಟಿರುವುದನ್ನು ಓದುತ್ತ, ಹೇಳಿದರು. ಇಬ್ಬರೂ ಒಟ್ಟಿಗೆ ಪರಿಸ್ಥಿ ತಿಯನ್ನು ವಿಮರ್ಶಿಸಿದರು ಮತ್ತು ಸೂಕ್ಷ್ಮ ವಾಗಿ ಪ್ರತಿಯೊಂದು ವಿವರವನ್ನು ಪರಿಶೀಲಿಸಿ ದರು.

"ಗುಂಡಾಗಿರಿ ವಿರುದ್ಧ ನೀವು ಉಪವಾಸ ಮಾಡ ಬಲ್ಲಿರಾ?" ಎಂದು ಆ ಗೆಳೆಯರು ವಾದಿಸಿ ದರು. "ಈ ಕಲಹಾಗ್ನಿಯನ್ನು ಗುಂಡರು ಹೊತ್ತಿಸಿಲ್ಲ, ಗುಂಡರಾದವರು, ಗುಂಡತನವನ್ನು ತಾಳಿದವರು ಹೊತ್ತಿಸಿದ್ದಾರೆ. ನಮ್ಮ ಸಹಾನು ಭೂತಿ ಮತ್ತು ನಿಷ್ಕ್ರಿಯಾತ್ಮಕ ಬೆಂಬಲವಿಲ್ಲದೆ ಗುಂಡರಿಗೆ ನಿಲ್ಲಲು ಕಾಲೇಬರದು. ಗುಂಡರ ಹಿಂದಡಗಿದವರ ಹೃದಯವನ್ನು ಸ್ಪರ್ಶಿಸಲು ನಾನು ಬಯಸುತ್ತೇನೆ"

"ಆದರೆ ಈ ಅಂತದಲ್ಲಿ ನೀವು ಉಪವಾಸ ಹೂಡಬೇಕೇ?" ಕೊನೆಯದಾಗಿ ಮಿತ್ರರು ಕೇಳಿದರು "ಸ್ವಲ್ಪಕಾಲ ತಡೆದು ನೋಡಬಾ ರದೇಕೆ?"

ಇದಕ್ಕೆ ಗಾಂಧೀಜಿಯು ಉಪವಾಸ ಈಗ ಮಾಡಿದರೆ ಮಾಡಬೇಕು, ಇಲ್ಲದಿದ್ದರೆಂದೂ ಇಲ್ಲ ವೆಂದು ಉತ್ತರವಿತ್ತರು. "ಕಡೆಗೆ ಅದು ಬಹಳ ಸಮಯ ಮೀರಿದ್ದಾಗುತ್ತದೆ. ಅಲ್ಪಸಂ ಖ್ಯಾತ ಮುಸ್ಲಿಮರನ್ನು ಅಪಾಯಕರ ಸ್ಥಿತಿ ಯಲ್ಲಿ ಬಿಡಲಾಗದು. ಏನಾದರೂ ಒಳ್ಳೆಯಫಲ ಕೊಡಬೇಕಾಗಿದ್ದರೆ ನನ್ನ ಉಪವಾಸವು ಸಂಭಾ ವ್ಯ ಪ್ರತಿರೋಧಕವಾಗಿರಬೇಕು."

"ಕಲಕತ್ತವನ್ನು ನಿಯಂತ್ರಿಸಲು ಶಕ್ತನಾ ದರೆ ನಾನು ಪಂಜಾಬನ್ನು ಎದುರಿಸಲು ಶಕ್ತ ನಾಗುವೆನೆಂದು ಬಲ್ಲೆ"—ಗಾಂಧೀಜಿ ಮುಂಬರಿ ದರು. "ಆದರೆ ನಾನು ಈಗ ತಪ್ಪಿದರೆ, ದ್ವೇ ಷಾಗ್ನಿ ಭುಗಿಲೆಂದು ಪಸರಿಸಬಹುದು; ಎರಡು ಮೂರು ಶತ್ರುರಾಷ್ಟ್ರಗಳು ನಮ್ಮ ಮೇಲೇರಿ ಬಂದು ನಮ್ಮ ಅಲ್ಪಾಯುವಾದ ಸ್ವಾತಂತ್ರ್ಯ ಸ್ವಪ್ನವನ್ನು ಕೊನೆಗೊಳಿಸಿ ಬಿಡಬಹುದೆಂಬು ದನ್ನು ನಾನು ಸ್ಪಷ್ಟವಾಗಿ ಅರಿತಿದ್ದೇನೆ."

"ಒಂದು ವೇಳೆ ನೀವು ಮಡಿದರೆ ಬೆಂಕಿ ಗಗ ನವನ್ನು ಚುಂಬಿಸೀತು," ಮಿತ್ರರುವಾದಿಸಿದರು.

"ಕೊನೆಯ ಪಕ್ಷ ಅದನ್ನು ನೋಡಲು ನಾನಾ ದರೂ ಅಲ್ಲಿರುವುದಿಲ್ಲವಲ್ಲ! ನನ್ನ ಅಳಿಲು ಸೇವೆ ಯನ್ನು ನಾನು ಸಲ್ಲಿಸಿ ಆಗಿರುತ್ತದೆ. ಹೆಚ್ಚು ಮಾಡಲು ಮನುಷ್ಯನಿಗೆ ದೈವಾಜ್ಞೆ ಯಿಲ್ಲ." ಗಾಂಧೀಜಿ ಉತ್ತರವಿತ್ತರು.

ಗೆಳೆಯರು ವಿಚಾರಪರರಾದರು.

ಗಾಂಧೀಜಿಯು ತಾವು ಬರೆದಿಟ್ಟ ಹೇಳಿಕೆಯಲ್ಲಿ ತಮ್ಮ ಬಗ್ಗೆ ಇಟ್ಟುಕೊಂಡ ಅಭಿಪ್ರಾಯವನ್ನು ಓದಿ ಅವರು (ಗೆಳೆಯರು)—"ನೀವು ಸಂಪೂ ರ್ಣವಾಗಿ ದೇವರ ಕೈಯಲ್ಲೇ ಪಡಪರ್ತಿಗಳಾಗಿ ರಬಯಸುವಿರಾದರೆಬರಿದೆ ನೀರಿಗೇಕೆ ಲಿಂಬೆಹುಳಿ ಹಿಂಡಬಯಸುವಿರಿ?" ಎಂದು ತನ್ನಷ್ಟಕ್ಕೆ ತಾನೇ ಪ್ರಕಾಶವಾಗಿ ಉಚ್ಚರಿಸಿದನು.

"ನೀವು ಹೇಳಿದ್ದು ಸರಿ," ಗಾಂಧೀಜಿ ಕೂಡಲೇ ಉತ್ತರವಿತ್ತರು. "ನನ್ನ ದೌರ್ಬಲ್ಯ ದಿಂದ ನಾನು ನನಗೆ ಅಂತಹ ಸ್ಥಿತಿಯನ್ನು [ಲಿಂಬೆಹುಳಿ ಹಿಂಡಿದ ನೀರು ಕುಡಿಯುವದನ್ನು] ಉಳಿಸಿಕೊಂಡೆ. ನಾನು ಬರೆಯುತ್ತಿರುವಾಗಲೇ ಅದು ನನಗೆ ಸಂಪೂರ್ಣ ಸಮಂಜಸವೆಂದು ತೋರಲಿಲ್ಲ. ಸತ್ಯಾಗ್ರಹಿಯು ಸಮಯಕ್ಕೆ ಸರಿ ಯಾಗಿ ಕಾರ್ಯವನ್ನು ಪೂರ್ತಿಗೊಳಿಸಿ ತನ್ನ ಔಪಾ ಧಿಕ ಉಪವಾಸವನ್ನು ಕೊನೆಗಾಣಿಸಿ ಬದುಕಿ ಉಳಿವ ಭರವಸೆಯುಳ್ಳವನಾಗಿರಬೇಕು.

ಆದುದರಿಂದ ನೀರಿಗೆ ಲಿಂಬೆಹುಳಿ ಹಿಂಡಬೇ ಕೆಂದಿರುವ ಭಾಗವನ್ನು ತಮ್ಮ ಹೇಳಿಕೆಯಿಂದ ಗಾಂಧೀಜಿ ಹೊಡೆದುಹಾಕಿದರು. ಹಾಗೆ ಅನಂ ತರ ಅಮಿಶ್ರಿತವಾದ ಶುದ್ಧ ಶ್ರದ್ಧೆಯ ಸಾಹಸವು ಪ್ರಾರಂಭಿಸಲ್ಪಟ್ಟಿತು.

ಇದು ಸೋಮವಾರ ರಾತ್ರಿ ನಡೆದುದು. ಎರಡು ದಿನಗಳ ನಂತರ ಕಲಕತ್ತದ ಪ್ರಮುಖ ಮುಸ್ಲಿಂಲೀಗ ಮುಖಂಡನು ಉಪವಾಸ ನಿಲ್ಲಿ ಸಲು ಗಾಂಧೀಜಿಯನ್ನು ಬೇಡಿಕೊಳ್ಳಲು ಕಾದು ಕುಳಿತಿದ್ದನು. ಅವನು "ನಮ್ಮ ನಡುವೆ ನೀವಿ ರುವುದೇ ನಮಗೊಂದು ಲಾಭ, ಗೌರವ, ಅನೇ ನಮ್ಮ ಸುರಕ್ಷಿತತೆಯ ಹೊಣೆ. ಅದು ನಮಗಿಲ್ಲ ದಂತೆ ಮಾಡಕೂಡದು" ಎಂದನು.

"ಆ ದಿನ ನನ್ನ ಅಸ್ತಿತ್ವವು ದುರುಳರನ್ನು ತಡೆಯಲಿಲ್ಲ. ಅವರ ಮುಟ್ಟಿಗೆ ನನ್ನ ಮಾತು ಗಳು ಸಂಪೂರ್ಣವಾಗಿ ತಮ್ಮ ಕಾರ್ಯಕ್ಷಮತೆ ಯನ್ನು ಕಳೆದುಕೊಂಡಂತಿದ್ದವು. ಈ ದಿವದಿಸ ನನಂದಿದಾಗಲೇ ನಾನು ಪಾರಣೆ ಮಾಡುವದು ಆಗಲೇ, ಆ ಹಿಂದಿನ ೧೫ ದಿನಗಳ ಪವಿತ್ರ ಶಾಂತಿ ಪುನರಾಗಮಿಸಿದಾಗಲೇ. ಮುಸ್ಲಿಮರು ನಿಜವಾಗಿಯೂ ನನ್ನನ್ನು ಪ್ರೀತಿಸುವುದಾದರೆ ಮತ್ತು ನಾನೊಬ್ಬ ಬೆಲೆಯುಳ್ಳ ವ್ಯಕ್ತಿಯೆಂದು ಗೌರವಿಸುವುದಾದರೆ ಇಡೀ ಕಲಕತ್ತವೇ ಹುಚ್ಚೆದ್ದು ಮೇಲೇರಿಬಂದರೂ ಪ್ರತೀಕಾರ ಬುದ್ಧಿಯನ್ನು ಬಿಟ್ಟು ಪ್ರತಿಭಟಿಸದೆ ಅವರು ತಮ್ಮ ಧರ್ಮಬುದ್ಧಿಯನ್ನು, ಶ್ರದ್ಧಾವಂತಿಕೆ ಯನ್ನು ನಿದರ್ಶನಕ್ಕೆ ತಂದುಕೊಡಬೇಕು. ಈ ನಡುವೆ ನನ್ನ ಅಗ್ನಿಪರೀಕ್ಷೆ (ಸತ್ವಪರೀಕ್ಷೆ) ಮುಂಬರಿಯಲೇ ಬೇಕು."

ಆ ಗೆಳೆಯರು ಭಾರವಾದ ಹೃದಯದಿಂದ ಹಿಂದಿರುಗಿದರು. ಅವರು ಹೋದ ಮೇಲೆ ಗಾಂಧೀಜಿಯೆಂದರು, "ದುರ್ವೃತ್ತರು ದುರ್ವ ರ್ತನದಿಂದ ದೂರಾಗಲಿ—ನನ್ನನ್ನು ಉಳಿಸುವು ದಕ್ಕಲ್ಲ—ನಿಜವಾದ ಹೃದಯಪರಿವರ್ತನದ ಫಲವಾಗಿ. ಶಾಂತಿಯ ಆಭಾಸವು ನನಗೆ ತೃಪ್ತಿ ಯನ್ನು ಕೊಡಲಾರದೆಂಬುದನ್ನು ಎಲ್ಲರೂ ತಿಳಿದು ಕೊಳ್ಳಲಿ. ಇದಕ್ಕೂ ಹೆಚ್ಚಿನ, ಕ್ರೂರತರವಾದ ಕಿಚ್ಚುರಿದೇಳುವ ಸಂಭಾವ್ಯಕ್ಕೆ ಸಾಧಕವಾದ ತಾತ್ಕಾಲಿಕ ತಂದ್ರತೆ ನನಗೆ ಬೇಡ. ಹಾಗೇ ನಾದರೂ ಆದರೆ ನಾನು ಯಾವ ಕರಾರಿಗೂ ಮಣಿಯದೆ ಮರಣಾಂತ ಉಪವಾಸವನ್ನು ಕೈಕೊ ಳ್ಳಬೇಕಾಗಿ ಬರಬಹುದು.

ಆಗ ಮೋಡಿಯ ಕಾರ್ಯ ಕಾಣಿಸಿಕೊಂ ಡಿತು. ಸೀಸದ ತೂಕದ ಗಂಟೆಗಳು ಉರುಳುತ್ತ ಹೋದ ಹಾಗೆ ಮತ್ತು ಆ ದುರ್ಬಲನಾದ ಉಪವಾಸ ಶಯ್ಯಾಗತನಾದ ಚಿಕ್ಕ ಮನುಷ್ಯನ ಶಕ್ತಿಯು ಕರಗಿಹಾರಿ ಹೋಗುತ್ತಿದ್ದ ಹಾಗೆ- ಸಂಬಂಧಿಸಿದ ಸರ್ವರ ಹೃದಯ ಸಮುದ್ರ ಮಥನ ನಡೆದು ಅಡಗಿದ್ದ ಸುಳ್ಳು ಮೇಲೆ ಬರು ವಂತಾಯಿತು. ಇನ್ನೊಂದು ಜೀವಂತ ಕಿವಿಗೆ ಎಂದೂ ಹೇಳದಿರುವಂಥ ಸಂಗತಿಗಳನ್ನು ಗಾಂಧೀಜಿ ಯೆದುರು ತೋಡಿಕೊಳ್ಳಲು ಜನರು ಬರತೊಡಗಿದರು; ಬಂದು ತಪ್ಪೊಪ್ಪಿಕೊಳ್ಳತೊ ಡಗಿದರು. ಅಜ್ಞಾತಮಂದಿರಲ್ಲಿಯ ಶಾಂತಿ ಯನ್ನು ಕೊಳ್ಳಲು ಬೆಲೆಯಾಗಿ ಪಣವಿಟ್ಟ ಗಾಂಧೀಜಿಯ ಅಮೂಲ್ಯ ಜೀವನವನ್ನು ಉಳಿ ಸಲು ಹಿಂದು ಮುಸ್ಲಿಮರು ಸರ್ವತೋಮುಖ ವಾದ ಪ್ರಯತ್ನವೆಸಗುವುದರಲ್ಲಿ ಒಂದಾದರು. ಜಾತೀಯ ಸೌಹಾರ್ದ ಸ್ಥಾಪನೆಗಾಗಿ ಗಲಭೆಯ ಪ್ರದೇಶಗಳಲ್ಲಿ ಸರ್ವ ಜಾತೀಯ ಮಿತ್ರ ಮೆರವ ಣಿಗೆಗಳನ್ನು ತೆರೆಯಲಾಯಿತು. ನಗರದ ದುಃಶಾಸನರನ್ನು ಅಡಗಿಸುವ ಬಲವುಳ್ಳವರೆನಿಸಿದ ೫೦ ಜನರ ಗುಂಪೊಂದು ೪ ನೆಯ ತಾರೀಕಿನ ದಿವ ಗಾಂಧೀಜಿಯನ್ನು ಕಂಡು ಗಲಭೆಗಾರ ರನ್ನು, ಸಂತ್ರಾಸಕರನ್ನು ಹಿಡಿತದಲ್ಲಿ ತರುವು ದಾಗಿ ಆಶ್ವಾಸನವಿತ್ತರು ಗಾಂಧೀಜಿಗೆ ಬೀಳದೆ ಸ್ವಲ್ಪದರಲ್ಲೆ ತಪ್ಪಿದ ಬಡಿಗೆಯನ್ನೆಸೆದ ತುಂಟನ ನ್ನೊಳಗೊಂಡು ಕಳೆದ ಭಾನುವಾರ ಅವರ ಶಿಬಿರದಲ್ಲಿ ಗಲಾಟೆಯೆಬ್ಬಿಸಿದವರ ತಂಡದೊಡೆ ಯರೆಲ್ಲರನ್ನೂ ಆಗಲೇ ನಿಯಂತ್ರಣದೊಳಗೆ ತರಲಾಗಿದೆಯೆಂದು ಅವರು ನಿವೇದಿಸಿದರು. ಅವರೆಲ್ಲರೂ ಗಾಂಧೀಜಿಗೆ ಶರಣಾಗತರಾಗಿ ಕೊಟ್ಟ ಶಿಕ್ಷೆಯನ್ನು ಅನುಭವಿಸಲೊಪ್ಪಿರುವ ದಾಗಿ ಹೇಳಿದರು. ಅವರ ಉಪವಾಸದ ದೆಸೆ ಯಿಂದ ದುಃಖಭರಿತರಾಗಿರುವುದರಿಂದ ಮುಕ್ತ ರಾಗಿ ತಾವು ತಂತಮ್ಮ ಕೆಲಸಕ್ಕೆ ಹೋಗಲನು ಕೂಲವಾಗುವಂತೆ ತಮ್ಮ ಆಶ್ವಾಸನದ ಆಧಾರದ ಮೇಲೆ ಉಪವಾಸವನ್ನು ಗಾಂಧೀಜಿ ನಿಲ್ಲಿಸಬಾ ರದೇ? ಎಂದು ಅವರು ಕೇಳಿದರು. ಅದು ಸಾಲ ದಿದ್ದರೆ ಉಪವಾಸದ ನಿಲುಗಡೆಗೆ ಮತ್ತಾವ ಕರಾರಿದೆ? ಎಂದು ಪ್ರಶ್ನಿಸಿದರು. ಅದಕ್ಕೆ ಗಾಂಧೀಜಿ ಪಶ್ಚಿಮ ಬಂಗಾಲವೆಲ್ಲ, ಅಷ್ಟೇ ಏಕೆ, ಇಡೀ ಹಿಂದುಸ್ತಾನವೆಲ್ಲ ಹುಚ್ಚೆದ್ದು ಹರಿದು ಕಲಹಾಗ್ನಿ ಧಗಧಗಿಸಿ ಪ್ರಲಯತಾಂಡವನಡೆಸಿ ದರೂ ಇನ್ನು ಮುಂದೆ ಕಲಕತ್ತ ನಗರದಲ್ಲಿ ಜಾತೀಯ ಗಲಭೆಯೇಳದು ಎಂದೂ ಮುಸ್ಲಿ ಮರು ಸ್ವತಃ ಬಂದು ನಾವು ಸುರಕ್ಷಿತರಾಗಿ ದ್ದೇವೆ ಉಪವಾಸ ನಿಲ್ಲಿಸಬೇಕು ಎಂದೂ ತಮ್ಮಲ್ಲಿ ಹೇಳುವಂತಾಗಬೇಕು ಎಂದೂ ಆಶ್ವಾಸನ ದೊರೆ ತರೆ ಉಪವಾಸ ಮುರಿಯುವೆನು—ಎಂದರು. ತಮ್ಮಲ್ಲಿ ಅಗತ್ಯವಾಗಿರಬೇಕಾದ ಧಾವಸತ್ಯ, ಅನಾ ಸಕ್ತಿ ಮತ್ತು ಮನೋನಿಷ್ಠೆಯುಲ್ಲವಾದ ಕಾರಣ ನಮಗೆ ಎಷ್ಟೇ ಬಯಕೆಯಿದ್ದರೂ ನಗರದ ಎಲ್ಲ ಗುಂಡರನ್ನೂ ನಿಯಂತ್ರಿಸಬಲ್ಲೆವೆಂಬ ನಿರೀಕ್ಷೆ ಯಿಲ್ಲವೆಂದು ಅವರು ವಿಶದಪಡಿಸಿದರು. ಆದರೆ ಅವರ ಜಾತೀಯತದ್ದುಗಳನ್ನಾದರೂ ಶುದ್ಧೀ ಕರಿಸಲಾಗದಿದ್ದರೆ ಬದುಕುವುದು ವ್ಯರ್ಥವೆಂದೂ ಆದುದರಿಂದ ತಮ್ಮ ಬದುಕನ್ನು ಮುಂಬರಿಸಲು ಲಕ್ಷ್ಯ ಕೊಡುವುದಿಲ್ಲವಾಗಿಯೂ ಗಾಂಧೀಜಿ ಅಭಿ ಪ್ರಾಯಪಟ್ಟರು. ಬಂದ ಪ್ರಮುಖರು ತಮ್ಮ ಉಪವಾಸದಿಂದ ಅವರಿಗೆ ದುಃಖವುಂಟಾಗುತ್ತ ದೆಂಬುದರ ಅರ್ಥ ತಮಗಾಗಲಿಲ್ಲವೆಂದು ಅವರು ಹೇಳಿದರು. ಅವರು ಹೇಳಿದ್ದು ನಿಜವಾಗಿಯೂ ಹೃದಯದಿಂದ ಬಂದದ್ದಾದರೆ ಅವರೇಕೆ ತಮ್ಮ (ಗಾಂಧೀಜಿಯ) ಉಪವಾಸದಿಂದ ನಿರ್ವಿಣ್ಣರಾ ಗಬೇಕು.?

"ಉಪವಾಸದ ಒತ್ತಾಯಕ್ಕೆ ಸಿಕ್ಕ—ಅತ್ಯ ನಿಷ್ಕ್ರಿಯಾಭಿಪ್ರಾಯದಿಂದಲ್ಲದೆ— ಯಾವುದಾದ ರೊಂದು ಹೆಜ್ಜೆಯನ್ನು ಇಟ್ಟರೆ ಆದರೆ ಅದು ದುಃಖಹೇತುವಾದೀತು ಆದಕ್ಕೆ ಎಸೆ ಮತ್ತು ತಲೆಗಳಲ್ಲಿ (ಭಾವನೆ ಮತ್ತು ಬುದ್ಧಿಗಳಲ್ಲಿ) ಸಂಪೂರ್ಣ ಸಹಕಾರವಿದ್ದರೆ ದುಃಖ ಅಥವಾ ನಿರ್ವೇದಕ್ಕೆ ಅಲ್ಲಿ ಯಾವ ಎಡೆಯೂ ಇರಬಾ ರದು. ನನ್ನ ಉಪವಾಸದ ಉದ್ದೇಶವೆಂದರೆ, ಶುದ್ಧೀಕರಿಸುವದು, ನಮಗೆ ಹಿಡಿದ ಜಾಡ್ಯ ವನ್ನು ಮತ್ತು ಬುದ್ಧಿಮಾಂದ್ಯವನ್ನು ಕೊಡಹಿ ನಮ್ಮ ಶಕ್ತಿಯನ್ನು ಕಾರ್ಯೋನ್ಮುಖವಾದು ವದು—ಅಲ್ಲದೆ ನಮ್ಮನ್ನು ಮೂರ್ಛೆಗೊಳಿಸ ಲಿಕ್ಕಲ್ಲ ಅಥವಾ ನಮ್ಮನ್ನು ನಿಷ್ಕ್ರಿಯರನ್ನಾಗಿ ಮಾಡುವದಕ್ಕಾಗಿ ಅಲ್ಲ.

"ನನ್ನ ಆಹಾರತ್ಯಾಗವು ದುಃಶಕ್ತಿಗಳನ್ನು ವಿಕೇಂದ್ರೀಕರಿಸುತ್ತದೆ; ವಿಭಕ್ತವಾದಕೂಡಲೆ, ವಿಯುಕ್ತವಾದೊಡನೆ ಅವು ವಿನಷ್ಟವಾಗುವವು. ಏಕೆಂದರೆ, ಕೇಡು ತಾನೇ ಒಂಟಿಯಾಗಿ ಅಸ ಹಾಯ ಸ್ಥಿತಿಗಿಳಿದರೆ ತನ್ನ ಕಾಲ ಮೇಲೆ ತಾನ ನಿಲ್ಲಲಾರದು—ಅದಕ್ಕೆ ಕಾಲೇ ಇಲ್ಲ! ೬ ರಿಂದ ನನ್ನ ಉಪವಾಸದ ಪ್ರೋತ್ಸಾಹದಿಂದ ನೀವು ಇನ್ನೂ ಹೆಚ್ಚಿನ ಸಾಮರ್ಥ್ಯದಿಂದ ಕೆಲಸ ಮಾಡಬೇಕಲ್ಲದೆ ಅದರ ಭಾರದಿಂದ ಹಣ್ಣಾಗಬಾ ರದು," ಎಂದು ಗಾಂಧೀಜಿ ಮಾತು ಮುಗಿಸಿ ದರು.

ಗಾಂಧೀಜಿ ಹೇಳಿದಂತೆ ಆಚರಿಸಿ ತೋರಿಸಿದ ಹೊರತು ಅವರನ್ನು ಉಪವಾಸ ನಿಲ್ಲಿಸಿರೆಂದು ಕೇಳುವುದು ನ್ಯಾಯವಲ್ಲವೆಂದು ತಿಳಿದುಕೊಂಡು ಪ್ರತಿನಿಧಿಗಳ ಮಂಗಡವು ಮನೆಯ ಹಾದಿ ಹಿಡಿ ಯಿತು. ಅನಂತರ ಮಧ್ಯಾಹ್ನ ಸತ್ಯವಾದ ಪಶ್ಚಾ ತ್ತಾಪಕರ್ಮವೆಂದು, ತೋರುವಂತೆ ಹಿಂದೆ ಗಾಂಧೀಜಿಯ ಶಿಬಿರದಲ್ಲಿ ಗಲಭೆಯೆಬ್ಬಿಸಿದವರ ನಾಯಕರಲ್ಲನೇಕರು ಬಂದು ಅವರಿಗೆ ಶರಣಾ ಗತರಾದರು.

ಆ ಸಂಜೆ ಶಾಹೀದ ಸಾಹೇಬ, ಶ್ರೀ ಎನ್. ಸಿ. ಚಟರ್ಜಿ ಮತ್ತು ಸರದಾರ ನಿರಂಜನಸಿಂಗ ಮುಂತಾದವರಿಂದ ಕೂಡಿದ ಸರ್ವಜಾತೀಯ ಪ್ರತಿನಿಧಿಗಳ ಮತ್ತೊಂದು ಮಂಡಲವು ಗಾಂಧೀ ಜಿಯನ್ನು ಕಾಣಲು ಕಾದು ನಿಂತಿತು. ತಾವು ಗಲಭೆ ನಡೆದ ಎಲ್ಲ ಪ್ರದೇಶಗಳಿಗೂ ಹೋಗಿ ದ್ದೆವೆಂದೂ ಅಲ್ಲೆಲ್ಲ ಸಂಪೂರ್ಣಶಾಂತಿನೆಲೆಸಿದೆ ಯೆಂದೂ ಗಾಂಧೀಜಿಗೆ ಹೇಳಿದರು. ಜಾತೀಯ ವಲ್ಲದ, ನಿಜವಾಗಿಯೂ ಗುಂಡರಿಂದ ಪ್ರಾರಂಭಿಸ ಲ್ಪಟ್ಟ ಆ ದಂಗೆಯು ಪುನಃ ತಲೆದೋರುವ ಲಕ್ಷಣವಿಲ್ಲವೆನ್ನಲು ತಮಗೆ ಸಾಕಷ್ಟು ಕಾರಣಗ ಳಿವೆಯೆಂದು ಅವರೆಂದರು. ಗಾಂಧೀಜಿ ಉಪ ವಾಸ ನಿಲ್ಲಿಸಬೇಕೆಂದು ಅವರು ಪ್ರಾರ್ಥಿಸಿದರು. ಎಲ್ಲ ತಪ್ಪನ್ನೂ ಗುಂಡರ ಮೇಲೆ ಹೊರಿಸಿ ತಮ್ಮ ನಿರ್ದೋಷತ್ವವನ್ನು ಸ್ಥಾಪಿಸುವ ನೈತಿಕ ಘಂಥತೆಯನ್ನು ಗಾಂಧೀಜಿಯು ಮೆಲ್ಲನಿ ಯಿಂದ ಟೀಕಿಸಿದರು. ಅದೊಂದು ಅಪಾಯಕರ ವಾದ ಸಾಧನ. ಸಾಮಾನ್ಯ ನಾಗರಿಕನ ಇಲ್ಲವೆ ಅಸ್ತಿವಂತರ ಹೇಡಿತನ, ಇಲ್ಲವೆ ನಿಷ್ಕ್ರಿಯಾತ್ಮಕ ಸಹಾನುಭೂತಿಯು ಹೇಗೆ ಗುಂಡರೆಂದು ಹೇಳ ಲಾಗುವವರಿಗೆ ತಂಟೆಮಾಡಲು ಸಾಮರ್ಥ್ಯಕೊ ಡುತ್ತದೆಂಬುದನ್ನು ಗಾಂಧೀಜಿ ತಮ್ಮ ಬಾಲ್ಯದ ವೈಯಕ್ತಿಕ ಅನುಭವಗಳಿಂದ ಉದಾಹರಿಸಿ ದರು.

"ನನ್ನ ಉಪೋಷಣವು ನಿಮ್ಮನ್ನು ಹೆಚ್ಚು ಜಾಗ್ರತರನ್ನಾಗಿಯೂ ಸತ್ಯಸಂಧರನ್ನಾಗಿಯೂ ಪೂರ್ವಾಲೋಚನೆಯುಳ್ಳವರನ್ನಾಗಿಯೂ ಮಾ ಡಬೇಕು" ಎಂದು ಗಾಂಧೀಜಿ ನುಡಿದರು.

ಉಪವಾಸ ಮುರಿಯಬೇಕೆಂಬ ಅವರ ಪ್ರಾರ್ಥನೆಯನ್ನು ಆ ಬಳಿಕ ತೆಗೆದುಕೊಂಡು ಅವರನ್ನು ಕುರಿತು ಗಾಂಧೀಜಿ ನೇರವಾಗಿ ಎರಡು ಪ್ರಶ್ನೆಗಳನ್ನು ಕೇಳಿದರು. ಅವರು ಪ್ರಾಮಾಣಿಕವಾಗಿ ಮುಂದೆಂದೂ ಕಲಕತ್ತದಲ್ಲಿ ಅಂತಹ ಜಾತೀಯ ಉನ್ಮಾದದ ಉರಿ ಉದಯಿ ಸದೆಂದು ಆಶ್ವಾಸನ ಕೊಡಬಲ್ಲರೇ? ಇನ್ನು ಮುಂದೆಂದೂ ಜಾತ್ಯಂಧತೆಯನ್ನು ಬೆಳೆಸದ ಮತ್ತು ಸಹಿಸದಷ್ಟು ಹೃದಯ ಪರಿವರ್ತನ ಕಲ ಕತ್ತದ ನಾಗರಿಕರಲ್ಲಿ ಉಂಟಾಗಿದೆಯೆಂದು ಅವರು ಹೇಳಬಲ್ಲರೇ? ಆ ಹೊಣೆಯನ್ನು ಹೊರಲಾರದವರಾಗಿದ್ದರೆ ಅವರು ಗಾಂಧೀಜಿಗೆ ಉಪವಾಸವನ್ನು ಮುಂದುವರಿಸಲು ಬಿಡಬೇಕು. ಏಕೆಂದರೆ, ಸದ್ಯದ ಜಾತೀಯ ದಂಗೆಯನ್ನು ಮತ್ತೊಂದು ಅನುಸರಿಸಿ ಬರುವುದಾದರೆ

—೯ನೇ ಪುಟಕ್ಕೆ

# ಕಲಕತ್ತದಲ್ಲಿ

( ೮ ನೇ ಪುಟದಿಂದ )

ಗಾಂಧೀಜಿಯು ನಿಲ್ಲಿಸಲಾರದ ಅಮರಣ ಉಪವಾಸವನ್ನು ಕೈಕೊಳ್ಳಬೇಕಾಗುತ್ತದೆ. "ಆದರೆ ನೀವೇನೂ ಸರ್ವಜ್ಞರಲ್ಲವಾದುದರಿಂದ ಒಂದು ವೇಳೆ ನೀವು ಇಂದು ಜವಾಬುದಾರಿ ಕೊಟ್ಟರೂ ಮುಂದೆ ಅಂತಹ ಜಾತೀಯ ದಂಗೆಯೊಂದು ಪ್ರಾರಂಭವಾಯಿತೆಂದರೆ ಅಂತಹ ಸಂದರ್ಭದಲ್ಲಿ ಅಲ್ಪಸಂಖ್ಯಾಕರ ಒಂದು ಕೂದಲಾದರೂ ಕೊಂಕುವುದರೊಳಗೆ ನೀವು ಶಕ್ತಿಮೀರಿ ಅದನ್ನು ತಡೆಯಲು ಹೆಣಗುವುದಾಗಿ ಹಾಗೂ ಆ ಕಾಲಾನಲವನ್ನು ನಂದಿಸುವ ಯತ್ನದಲ್ಲೇ ಸಾಯುವದಲ್ಲದೆ ಅಪಜಯವನ್ನರುಹಲು ಸಜೀವರಾಗಿ ಹಿಂದಿರುಗುವುದಿಲ್ಲವಾಗಿ ವಚನ ಕೊಡಬಲ್ಲಿರಾ? ಇದನ್ನು ನೀವು ನನಗೆ ಬರೆದುಕೊಡಬೇಕು," ಎಂದು ಮಹಾತ್ಮರು ಕೇಳಿದರು. ಅಂತಹ ಹೊಣೆಯನ್ನು ಬರೆದು ಕೊಡುವುದಾದರೆ ತಾವು ಉಪವಾಸ ನಿಲ್ಲಿಸುವುದಾಗಿ ಅವರು ಅಭಿಪ್ರಾಯಪಟ್ಟರು. "ಆದರೆ ಎಚ್ಚರಿಕೆ—ನೀವು ಹೇಳುವುದೊಂದನ್ನು ಮಾಡುವುದಿನ್ನೊಂದನ್ನಾದರೆ ನನ್ನ ರಕ್ತ ನಿಮ್ಮ ತಲೆಯಮೇಲೆ ಹರಿದೀತು; ವಿಚಾರ ಮಾಡದೆ ಅವಸರದಿಂದ ಉಪವಾಸವನ್ನು ನಿಲ್ಲಿಸಹೋಗುವದಕ್ಕಿಂತ ಅದನ್ನು ಕೆಲಕಾಲ ಮುಂದುವರಿಸುತ್ತೇನೆ, ಅದರಿಂದ ನನಗೇನೂ ಬಾಧಕವುಂಟಾಗಲಾರದು. ಒಬ್ಬನು ಉಪವಾಸವನ್ನು ಕೈಕೊಂಡರೆ ಕೊಡಗಟ್ಟಲೆ ನೀರಲ್ಲ—ದೇವರು ಅವನನ್ನು ಆಧರಿಸಿ ಹಿಡಿಯುವವನು," ಎಂದು ಮುನ್ನುಡಿದರು.

ಗಾಂಧೀಜಿ ಅತ್ಯಂತ ಆಳವಾದ ಭಾವಾವೇಶದಿಂದ ಮಾತನಾಡಿದರು. ಅದ್ಭುತ ನೀರವತೆ ನೆಲೆಸಿತು. ಶಾಹೀದ ಸಾಹೇಬರು ಮಾತಾಡಲು ಮೊದಲು ಮಾಡಿದರು. ಕಲಕತ್ತದ ನಾಗರಿಕರಿಗೆ ಬುದ್ಧಿಸ್ವಾಸ್ಥ್ಯವುಂಟಾದೊಡನೆ ಉಪವಾಸ ನಿಲ್ಲಿಸುವುದಾಗಿ ಗಾಂಧೀಜಿಯೆಂದಿದ್ದರು. ಆ ಕರಾರು ಪೂರೈಯಿಸಲ್ಪಟ್ಟಿದೆ. ಆ ಹೇಳಿಕೆಗೆ ಸಹಿಮಾಡಿರೆಂದು ಅವರು ಕೇಳಿದ್ದರಿಂದ ಮತ್ತೊಂದು ಕರಾರನ್ನು ಅವರು ಹಾಕಿದಂತಾಗಲಿಲ್ಲವೆ? ಈ ವಾಯಿದೆಯ ವಾದಕ್ಕೆ ಗಾಂಧೀಜಿಯು ಹೊಸ ಕರಾರಾವುದನ್ನೂ ಹಾಕಲಾಗಿಲ್ಲವೆಂದು ಉತ್ತರವಿತ್ತರು. ಅಲ್ಲಿರುವುದೆಲ್ಲವೂ ಉಪವಾಸದ ಮೂಲ ಕರಾರುಗಳಲ್ಲಿಯೇ ಅಡಕವಾಗಿತ್ತೆಂದರು. 'ನಾನು ಈಗ ಹೇಳಿದ್ದೊಂದು ನಿಕಟ ಸತ್ಯ—ಎಂಥದು ಎಂಥದು, ಏನು ಏನೆಂಬುದನ್ನು ನಿಮಗೆ ತಿಳಿಸುವುದರ ಸಲುವಾಗಿ. ನಿಮ್ಮ ದೃಢಾಭಿಪ್ರಾಯ ಮತ್ತು ಭಾವನೆಗಳಲ್ಲಿ ಸಂಪೂರ್ಣ ಹೊಂದಿಕೆಯಿದ್ದರೆ ಆ ಘೋಷಣೆಗೆ ಸಹಿಹಾಕುವುದರಲ್ಲಿ ಏನೂ ಕಷ್ಟವಿಲ್ಲ. ಅದು ನಿಮ್ಮ ಪ್ರಾಮಾಣಿಕತೆ ಮತ್ತು ದೃಢಾಭಿಪ್ರಾಯ ಪ್ರಕಟನಾಧೈರ್ಯದ ನಿಕಷ. ನನ್ನನ್ನು ಬದುಕಿಸಲೋಸುಗ ಸಹಿ ಮಾಡುವುದಾದರೆ ನೀವು ನನ್ನ ಮರಣವನ್ನು ಆಗಲೇ ರೂಪಿಸುತ್ತಿರುವವರಾಗುವಿರಿ"

ಎಚ್ಚರಿಕೆಯ ಗಾಂಭೀರ್ಯವನ್ನು ಎಲ್ಲರೂ ಅರಿತರು. ಚರ್ಚೆಯ ಉತ್ತರಭಾಗದಲ್ಲಿ ಅಲ್ಲಿಗೆ ಬಂದ ರಾಜಾಜಿ ಮತ್ತು ಆಚಾರ್ಯ ಕೃಪಲಾನಿಯವರು ಗಾಂಧೀಜಿಗೆ ವಿರಮಿಸಲು ಅನುಗೊಟ್ಟು ಹತ್ತಿರದ ಕೊಠಡಿಯಲ್ಲಿ ಅವರೆಲ್ಲರೂ ಪರಸ್ಪರ ಸಮಾಲೋಚನೆ ಮಾಡಬಹುದೆಂದರು. ಶಾಹೀದ ಸಾಹೇಬರು ಮೊದಲು ಅದಕ್ಕೊಪ್ಪಿದರು. ಅವರು ಕೊಠಡಿಯನ್ನು ಪ್ರವೇಶಿಸುವಷ್ಟರಲ್ಲಿ ನಾರಕೇಲ ದಂಗ, ಶೀತಲಕಾಲ, ಮಾಣಿಕತೋಲ ಮತ್ತು ಕಾಂಚಿರಗಂಜ ಪ್ರದೇಶಗಳ ೪೦ ಪ್ರತಿನಿಧಿಗಳ ಸಹಿಯಿರುವ ಒಂದು ಬಿನ್ನಹವನ್ನು ಒಳತರಲಾಯಿತು ಆ ಬಿನ್ನಹದಲ್ಲಿ ಸಹಿದಾರರು ಹಿಂದಿನ ದಂಗೆಗಳಲ್ಲಿ ಅತ್ಯಂತ ಹೆಚ್ಚಾಗಿ ಪೀಡಿತವಾದ ಆ ಪ್ರದೇಶದಲ್ಲಿ ಯಾವ ಆಕಸ್ಮಿಕ ಘಟನೆಯೂ ನಡೆಯದಂತೆ ನೋಡುವುದಾಗಿ ಶಪಥ ಮಾಡಿದ್ದರು ಮತ್ತು ಉಪವಾಸ ಮುರಿಯಬೇಕೆಂದು ಗಾಂಧೀಜಿಯನ್ನು ಪ್ರಾರ್ಥಿಸಿದ್ದರು. 'ಈ ಮಿಶ್ರ ಪ್ರದೇಶದಲ್ಲಿ ೧೯೪೭ ರ ಅಗಸ್ಟ ೧೪ ನೆಯ ತಾರೀಖಿನಿಂದ ಇಂದಿನ ವರೆಗೆ ಯಾವ ದುರ್ಘಟನೆಯೂ ಸಂಭವಿಸಿಲ್ಲವೆಂದು ಹೇಳಬಹುದು' ಎಂದು ಸಹಿದಾರರು ಮುನ್ನುಡಿದರು. ಬಿನ್ನಹವನ್ನು ಓದಿ ಶಾಹೀದ ಸಾಹೇಬರು 'ನಮ್ಮ ಪ್ರಯತ್ನವು ನಿಷ್ಫಲವಾಗಲಿಲ್ಲ" ಎಂದರು "ಹೌದು ದೇವರು ಕಾರ್ಯವನ್ನು ಆರಂಭಿಸಿದ್ದಾನೆ" ಎಂದರು ಗಾಂಧೀಜಿ.

ಶಾಹೀದ ಸಾಹೇಬರು ಪುನಃ ಹೇಳತೊಡಗಿದರು; "ಈ ಮುಸ್ಲಿಮರೂ ಬಿನ್ನಹದಲ್ಲಿ ಸೇರಿರುವುದರಿಂದ, ನೀವು ಉಪವಾಸವನ್ನು ಮುರಿಯಬಾರದೇಕೆ? ಅವರೇ ಈ ದಂಗೆಗಳಲ್ಲಿ ನಷ್ಟ ಹೊಂದಿದವರಾದರೂ ಅವರು ನಿಮ್ಮ ಶಾಂತಿ ಪ್ರಯತ್ನವನ್ನು ಅಂಗೀಕರಿಸಿದ್ದಾರೆ ಎಂಬುದನ್ನು ಇದು ನಿದರ್ಶಿಸುತ್ತದೆ. ಇದು ಮತ್ತಷ್ಟು ಅದ್ಭುತವಾಗಿದೆ; ಏಕೆಂದರೆ ಅವರು ಮೊದಲು ನಿಮ್ಮನ್ನು ತಮ್ಮ ಪರಮ ಶತ್ರುವೆಂದು ಗಣಿಸಿದ್ದರು. ಆದರೆ ನೀವು ಇಂದು ಅವರಿಗೆ ಸಲ್ಲಿಸಿದ ಸೇವೆ ಅವರ ಹೃದಯಕ್ಕೆ ಮುಟ್ಟಿದುದರಿಂದ ಅವರು ನಿಮ್ಮನ್ನು ತಮ್ಮ ಮಿತ್ರರೆಂದೂ ಸಹಾಯಕರ್ತರೆಂದೂ ಮನ್ನಣೆಕೊಟ್ಟಿದ್ದಾರೆ.

ಅದು ಬಹಳ ಸುಂದರವಾದ ಮಾತು—ಸುಂದರವಾಗಿ ಹೇಳಿದ್ದಾಗಿತ್ತು. ಶರಣಾಗತವಾತ್ಸಲ್ಯದಲ್ಲಿ ಕಡಿಮೆಯಿಲ್ಲದ ಸ್ಪರ್ಧಾಲುವಾದ ರಾಜಾಜಿಯು ತಕ್ಷಣ ಹೇಳಿದರು, "ನಾನು ಶಬ್ದವನ್ನು ಪರ್ಯಾಯಮಾಡಬಹುದಾದರೆ ಗಾಂಧೀಜಿಯು ಹಿಂದುಗಳ ಕೈಯಲ್ಲಿರುವುದಕ್ಕಿಂತ ಇಂದು ಮುಸ್ಲಿಂರ ಕೈಯಲ್ಲೇ ಹೆಚ್ಚು ಸುರಕ್ಷಿತವಾಗಿದ್ದಾರೆ"

ಈ ಶರಣಾಗತವಾತ್ಸಲ್ಯದ ಸ್ಪರ್ಧೆಯನ್ನು ಗಾಂಧೀಜಿಯು ಆಸಕ್ತಿಯಿಂದ ಕೇಳಿದರು ಮತ್ತು ಶಾಹೀದ ಸಾಹೇಬರು ನಷ್ಟಕ್ಕೊಳಗಾದವರು ಮುಸ್ಲಿಮರೆಂದುದನ್ನು ವಿಮರ್ಶೆಗೆ ತೆಗೆದುಕೊಂಡರು. ಅವರನ್ನು "ನಷ್ಟಕ್ಕೊಳಗಾದ ಪಕ್ಷ"ವೆನ್ನುವುದು ಗಾಂಧೀಜಿಗೆ ರುಚಿಸಲಿಲ್ಲ. "ಮುಸ್ಲಿಮರು ನಷ್ಟಪಟ್ಟ ಪಕ್ಷದವರೆಂದು ಹೇಳಬೇಡಿರಿ. ಸದ್ಯದ ನಮ್ಮ ಶಾಂತಿಪ್ರಯತ್ನದ ಸಾರಭೂತವಸ್ತುವೆಂದರೆ ಹಿಂದಿನದನ್ನು ಮರೆತುಬಿಡುವುದು. ಪಶ್ಚಿಮ ಬಂಗಾಲದಲ್ಲಿ ತಾವು ಅಡಿಯಾಳುಗಳೆಂದು ಮುಸ್ಲಿಮರು ಭಾವಿಸಬಾರದೆಂದು ನನ್ನ ಬಯಕೆ. ಭೇದವನ್ನು ಮರೆತ ಹೊರತು ನಾವು ಗಣ್ಯವಾದ ಯಾವ ಕೆಲಸವನ್ನೂ ಮಾಡಿದಂತಾಗದು" ಎಂದು ಅವರು ಹೇಳಿದರು.

ಆಗ ಅವರೆಲ್ಲರೂ ಹತ್ತಿರದ ಕೋಣೆಗೆ ಹೋದರು. ಮಾತಿನ ಉತ್ತರ ಭಾಗದಲ್ಲಿ ಗಾಂಧೀಜಿಗೆ ಆಯಾಸ ಮತ್ತು ಬೇಸರ ಉಂಟಾಗಿದ್ದರಿಂದ ವಿಶ್ರಾಂತಿ ತೆಗೆದುಕೊಳ್ಳಲೆಂದು ಅವರೊಬ್ಬರನ್ನೇ ಅಲ್ಲಿ ಬಿಟ್ಟರು.

ಕೋಣೆಯಲ್ಲಿ ನಡೆದ ಸಮಾಲೋಚನೆಯಲ್ಲಿ ಸಾಹೀದ ಸಾಹೇಬರು ಬಹು ಎಚ್ಚರದಿಂದ ದೀರ್ಘ ಚರ್ಚೆ ಮಾಡಿದ್ದು ಅವರ ಪ್ರಾಮಾಣಿಕತೆ ಮತ್ತು ಹೊಣೆಗಾರಿಕೆಗಳನ್ನೇ ತೋರಿಸುತ್ತದೆ. ಎಂದಿನಂತೆ ಆಚಾರ್ಯ ಕೃಪಲಾನಿಯವರು ವ್ಯಂಗ್ಯಟೀಕೆಮಾಡುತ್ತಲೂ ವಿಲಕ್ಷಣ ಹಾಸ್ಯವೆಬ್ಬಿಸುತ್ತಲೂ ಸಾಗಿದ್ದರು. ರಾಜಾಜಿಯು ತನ್ನ ಬುದ್ಧಿಮತ್ತೆ, ಚಮತ್ಕಾರ ಮತ್ತು ಪ್ರಭಾವಿತ್ವದಿಂದ ತಮ್ಮ ಭಾವನೆಯನ್ನು ತಾರ್ಕಿಕತೆಯ ಮರೆಯಲ್ಲಿ ಅಡಗಿಸಿಕೊಂಡಿದ್ದರು. ಸಮಾಲೋಚನೆಯು ಸಂಕ್ಷಿಪ್ತವಾಗಿದ್ದರೂ ಗಡಿಬಿಡಿಯದಾಗಿರಲಿಲ್ಲ. ರಾಜಾಜಿ ಪ್ರತಿಜ್ಞಾಪತ್ರದ ಒಕ್ಕಣೆಯನ್ನು ಹೇಳಿದರು. ಅದಕ್ಕೆ ಮೊದಲು ಶ್ರೀ. ಎನ್. ಸಿ. ಚಟರ್ಜಿಯವರೂ ಆ ಮೇಲೆ ಶ್ರೀ ದೇವೇಂದ್ರ ಮುಖರ್ಜಿಯವರೂ ಆ ಬಳಿಕ ಶಾಹೀದ ಸಾಹೇಬರೂ ಕಡೆಗೆ ಶ್ರೀ ಆರ್. ಕೆ. ಜೈದ್ಯ, ಸರದಾರ ನಿರಂಜನಸಿಂಗ ತಲೀಬ ಮತ್ತು ಉಳಿದವರು ಸಹಿಹಾಕಿದರು. ಏಟಿಗೇಟು, ಪ್ರತೀಕಾರಕ್ಕೆ ಪ್ರತೀಕಾರ ಎಂಬ ಅನಾಗರಿಕ ಕೃತ್ಯದಲ್ಲಿ ಭಾಗವಹಿಸಿದವರ ತಮ್ಮ ಪಶ್ಚಾತ್ತಾಪದ ಚಿಹ್ನವೆಂದು ಅಷ್ಟು ಹೊತ್ತಿಗೆ ಗಾಡಿಗಟ್ಟಲೆ ಕೊಡಲಿ ಹಾರಿ ಮುಂತಾದ ಆಯುಧಗಳನ್ನು ಗಾಂಧೀಜಿಗೊಪ್ಪಿಸಲು ತಂದಿದ್ದರು ವೇಳೆಗೆಳೆಯದೆ ಸಹಿದಾರರು ಉಕ್ತ ಪ್ರತಿಜ್ಞಾ ಪತ್ರವನ್ನು ಗಾಂಧೀಜಿಗೆ ಸಮರ್ಪಿಸಿದರು.

"ಆದರೆ, ಸ್ವಾಮೀ, ನಾನು ಈ ಪತ್ರಕ್ಕೆ ಸಹಿ ಹಾಕಿದ್ದರಿಂದ ಫಲವೇನು? ಯಾವಾಗ ಎಂದರೆ ಆಗ ನನ್ನನ್ನು ಪಾಕಿಸ್ತಾನಕ್ಕೆ ಕರೆಯಲಾದೀತು; ಆಗ ನನ್ನ ಪ್ರತಿಜ್ಞೆಯ ಗತಿಯೇನು?" ಎಂದು ಶಾಹೀದ ಸಾಹೇಬರು ಕೇಳಿದರು.

"ಅಂತಹ ಸಂದರ್ಭದಲ್ಲಿ ಉಳಿದವರು ಮಾಡಬೇಕಾದ ಕರ್ತವ್ಯವನ್ನು ಮಾಡುವರೆಂಬ ಆತ್ಮವಿಶ್ವಾಸ ನಿಮಗಿರಬೇಕು; ಅಲ್ಲದೆ ನೀವಾದರೂ ತಿರುಗಿ ಬರಬಹುದಲ್ಲ," ಎಂದು ಗಾಂಧೀಜಿ ಉತ್ತರಿಸಿದರು.

ಉತ್ತರಕೊಡುತ್ತ, 'ನನಗೆ ನಿಮ್ಮನ್ನು ವಂಚಿಸುವ ಇಚ್ಛೆಯಿಲ್ಲ ಮತ್ತು ನಾನೆಂದೂ ಉದ್ದೇಶಪೂರ್ವಕವಾಗಿ ಹಾಗೆ ಮಾಡುವವನಲ್ಲ ಎಂದು ಅತ್ಯಂತ ಎಚ್ಚರಿಕೆಯಿಂದ ಶಾಹೀದ ಸಾಹೇಬರೆಂದುದನ್ನು ಗಾಂಧೀಜಿ ಬಹಳ ಮೆಚ್ಚಿದರು.

"ಆಗಲಿ, ನಾನು ಈಗ ಉಪವಾಸ ಮುಗಿಸುತ್ತೇನೆ, ಎಂದು ಹೇಳಿ ಕಡೆಯಲ್ಲಿ " ಮತ್ತು ನಾಳೆ ಪಂಜಾಬಿಗೆ ಹೊರಡುತ್ತೇನೆ. ಮೂರುದಿನಗಳ ಹಿಂದಿಗಿಂತ ಈಗ ಹೆಚ್ಚು ಸಾಮರ್ಥ್ಯ ಮತ್ತು ಆತ್ಮವಿಶ್ವಾಸಗಳಿಂದ ನಾನು ಅಲ್ಲಿಗೆ ಹೋಗುವೆನು", ಎಂದು ಗಾಂಧೀಜಿ ನುಡಿದರು.

ಶಾಹೀದ ಸಾಹೇಬರು ನಡುವೆ ಬಾಯಿ ಹಾಕಿ, "ನೀವು ನಾಳೆ ಹೋಗಲಾರಿರಿ; ಶಾಂತಿಯನ್ನು ದೃಢಪಡಿಸಲು ನೀವು ಇನ್ನೆಂಟೆರಡು ದಿನಗಳಾದರೂ ಇಲ್ಲಿರಬೇಕು," ಎಂದರು. ಉಳಿದವರು ಅವರ ಮಾತಿಗೆ ಬೆಂಬಲವಿತ್ತರು. ಅವರ ಆ ಕಾಲದ ಅನಾರೋಗ್ಯತೆಯಲ್ಲಿ ರೈಲಿನ ಪ್ರಯಾಣ ಮಾಡುವುದು ಅಪಾಯಕರವೆಂಬ ತಮ್ಮ ಬಾಯಿಗೆ ಬಂದಿದ್ದ ಮಾತನ್ನು ಗಂಟಲಲ್ಲೇ ಹಿಡಿದು, ಅದನ್ನು ಅವರು ಗಾಂಧೀಜಿಗೆ ಹೇಳಲಿಲ್ಲ. ಅಲ್ಲದೆ ಬಿಹಾರದಲ್ಲಿ ಮತ್ತು ರೈಲುದ್ದಾರಿಯ ಇತರ ಭಾಗಗಳಲ್ಲಿ ಅನಿಯಂತ್ರಿತ ಜನಸಂದಣಿ ಅವರನ್ನು ತಮ್ಮ ಅಂಧರೂಚಿಯಲ್ಲಿ ಹರಿದು ಚೂರು ಮಾಡಬಹುದಾಗಿತ್ತು.

ಆದುದರಿಂದ ಗಾಂಧೀಜಿಯು ಪ್ರಯಾಣಕ್ಕೆ ಶನಿವಾರವು ಯೋಗ್ಯವೆಂದು ಆಗ ನಿಶ್ಚಯಿಸಲಾಯಿತು.

ಅಷ್ಟರಲ್ಲಿ ಡಾ. ದೀನಶಾ ಮೆಹ್ತಾರವರು ಕಿತ್ತಳೆಯ ರಸವನ್ನು ತರಲು ಧಾವಿಸಿದ್ದರು ತಮ್ಮ ರೂಢಿಯಂತೆ ಉಪವಾಸ ಮುರಿವ ಮೊದಲು ಗಾಂಧೀಜಿ ಪ್ರಾರ್ಥನೆ ಮಾಡಿದರು. ಆದರೆ ನಾನಾಗಲಿ ನನ್ನ ಗೆಳೆಯ ಶ್ರೀ ಚಾರುಭೂಷಣ ಚೌಧರಿಯವರಾಗಲಿ ಕಡೆಯ ಸುಖಕರ ದೃಶ್ಯವನ್ನು ನೋಡಲು ಅಲ್ಲಿ ಉಳಿಯಲಾರದಾದೆವು.

ಡಾಕಾದಲ್ಲಿ ನಾವು ಗಾಂಧೀಜಿಯಿಂದ ನಿಯುಕ್ತವಾದ ಕಾರ್ಯವೊಂದನ್ನು ನೆರವೇರಿಸಲು ಆಕ್ಷಣ ಹೋಗಬೇಕಾಗಿತ್ತು. ನಮಗೆ ರೈಲು ತಪ್ಪಿದರೆ ಆಕಾಶನೆತ್ತರ ಸಿದ್ಧನು ಹಾರಿ ಹೋದೇವೆಂದು ನಾನು ಅಲ್ಲಿಯೇ ನಿಲ್ಲುವ ಎಳೆತದಲ್ಲಿದ್ದ ನನ್ನ ಗೆಳೆಯರ ಕಿವಿಯಲ್ಲಿ ಹೇಳಿದೆ. ಆದುದರಿಂದ, ಹಾಗೆ ನಾವು ನಮ್ಮನ್ನು ಕೆಳಗಿನ ಕವಿಗೀತದಂತೆ ನಿಲ್ದಾಣಕ್ಕೊಯ್ಯಲು ಕಾದಿದ್ದ ಕಾರಿನತ್ತ ವೇಗವಾಗಿ ನಡೆದೆವು:

"ಬಾಳುಬತ್ತಿ ವಿರಸವಾಗೆ
ಇಳಿದು ಮೀಯೆ ಎಲೆಲೆ ಜೀವ,
ದಿವ್ಯದಯೆಯ ವೃಷ್ಟಿಯಲ್ಲಿ
!ನಿಮಿಷ ಮಾತ್ರದಿ !..."

ಇದನ್ನು ಅನುಸರಿಸಿ ರಾಮನಾಮಧ್ಯಾನ ಪ್ರಾರಂಭವಾಗಿ ಗಾಳಿಯಲ್ಲಿ ಹಬ್ಬಿ ಹರಿಯಿತು!

ಕಲಕತ್ತ ಮತ್ತು ಡಾಕಾ —ಪ್ಯಾರೇಲಾಲ
೫ ಮತ್ತು ೬ ಸೆಪ್ಟಂಬರ ೪೭

# ಸ್ಮೃತೀಶ ಬ್ಯಾನರ್ಜಿ

ಶಾಂತಿಯು ತನ್ನ ಬಲಿಯನ್ನು ತೆಗೆದುಕೊಂಡಿತು; ಶಾಂತಿಗಾಗಿ ಆತ್ಮಾರ್ಪಣವನ್ನು ಮಾಡಲು ಜನರ ಕೊರತೆಯೇನೂ ಇಲ್ಲವೆಂಬುದು ಇದರಿಂದ ಸಿದ್ಧವಾದುದು ಸಂತೋಷದ ಸಂಗತಿ. ಸೆಪ್ಟಂಬರ ೩ ನೇ ತಾರೀಖು ಶ್ರೀ ಸ್ಮೃತೀಶ ಬ್ಯಾನರ್ಜಿಯವರು ತಮ್ಮ ಕೆಲ ಗೆಳೆಯರೊಂದಿಗೆ ಕೆಲವೊಂದು ಕೆಲಸ ತೀರಿಸಿಕೊಂಡು ಮರಳಿ ಬರುತಿದ್ದರು. ಆಗ ಸಾಲೆ ಬಾಲ ಬಾಲಿಕೆಯರ ಶಾಂತಿ ಮೆರವಣಿಗೆಯೊಂದು ಪಾರ್ಕ ಸರ್ಕಸ್‌ದ ಕಡೆಗೆ ಹೊರಳಿದುದನ್ನು ಅವರು ಕಂಡರು. ಕಲಕತ್ತೆಯಲ್ಲೆಲ್ಲ ವಾತಾವರಣವಿನ್ನು ಒಳ್ಳೆ ಭಾವೋದ್ರಿಕ್ತವಾಗಿದ್ದುದರಿಂದ ಸ್ಮೃತೀಶ ಬಾಬುಗಳಿಗೆ ಏನೋ ಸ್ವಲ್ಪ ಗಂಡಾಂತರ ತೋರಿತು. ಆದುದರಿಂದ ಅವರು ಮೋಟರ ಕಾರಿನಲ್ಲಿ ಮೆರವಣಿಗೆಯ ಸಂಗಡವೆ ನಡೆದು ಆ ಬಾಲಕರು ಸರ್ಕ್ಯುಲರ ರೋಡ ಮತ್ತು ಪಾರ್ಕಸ್ಟ್ರೀಟಿನ ಜಾಂಕ್ಶನ್ ಮುಟ್ಟುವ ಕೆಲ ನಿಮಿಷ ಮೊದಲು ಅಲ್ಲಿಗೆ ಬಂದು ಮುಟ್ಟಿದ್ದರು. ಸ್ಮೃತೀಶ ಮತ್ತು ಅವರ ಗೆಳೆಯರು ಕಾರಿನಿಂದ ಕೆಳಗಿಳಿದು ಅಲ್ಲಿ ಕೂಡಿದ್ದ ಕೆಲ ಮುಸಲ್ಮಾನರ ಗೂಡ ಮಾತು ನಡೆಸಿದರು. ಅಲ್ಲಿನ ವಾತಾವರಣವು ಅತ್ಯಂತ ವಿರೋಧಕವಾಗಿದ್ದುದು ಅವರಿಗೆ ಕಂಡು ಬಂದದ್ದರಿಂದ ಮುಂದಕ್ಕೆ ಬರಬಾರದೆಂಬ ಸಂದೇಶವನ್ನು ಮೆರವಣಿಗೆಯ ಬಾಲಕರಿಗೆ ಕೊಟ್ಟು ಕಳಿಸಿದರು.

ಇದೇ ಸಮಯಕ್ಕೆ ಮೆರವಣಿಗೆಯ ಮೇಲೆ ದಾಳಿ ಮಾಡಲಾಗಿತ್ತು; ಬಾಲ ಬಾಲಿಕೆಯರು ಓಡಲು ಪ್ರಾರಂಭಿಸಿದ್ದರು. ಸ್ಮೃತೀಶ ಮತ್ತು ಸುಶೀಲ ದಾಸಗುಪ್ತರು ಹೆಣ್ಣು ಮಕ್ಕಳಿಗೆ ಆಶ್ರಯ ಕೊಡಲು ಪ್ರಯತ್ನಿಸಿದರು. ಕೊನೆಯಗಳಿಗೆಯಲ್ಲಿ ಅವರು ಮಾಡುತಿದ್ದುದೇನೆಂದರೆ ಕೆಲ ಹೆಣ್ಣು ಹುಡುಗಿಯರನ್ನು ಸುರಕ್ಷಿತ ಸ್ಥಳಕ್ಕೆ ಅವಸರದಿಂದ ಒಯ್ದು ಮುಟ್ಟಿಸುತಿದ್ದುದು. ಆ ಕಾಲಕ್ಕೆ ಅವರ ಶರ್ಟಿನ ಮೇಲೆ ರಕ್ತದ ಕರಾಳ ಕಲೆ ಬಿದ್ದಿದ್ದಿತು. ಮುಂದೆ ಕೆಲ ಹೊತ್ತಿನ ಮೇಲೆ ಸ್ಮೃತೀಶರ ಶವವನ್ನು ಆಸ್ಪತ್ರೆಗೆ ತರಲಾಯಿತು. ಸುಶೀಲರಿಗೆ ಇರಿತದ ಐದು ಗಾಯಗಳಾಗಿದ್ದುದು ಕಂಡು ಬಂದಿತು. ಈ ಹೊತ್ತಿನ ವರೆಗೂ ಅವಕ್ಕಾಗಿ ಅವರು ಚಿಂತಾಜನಕ ಪರಿಸ್ಥಿತಿಯಲ್ಲಿ ಬಿದ್ದುಕೊಂಡಿರುವರು.

ಸ್ಮೃತೀಶರಿಗೆ ಮರಣ ಕಾಲಕ್ಕೆ ೩೮ ವರುಷಗಳಾಗಿದ್ದುವು. ಅವರು ೧೫ ವರ್ಷದವರಾದಾಗಿನಿಂದಲೆ ರಾಜಕೀಯ ಚಳವಳಿಯಲ್ಲಿ ಧುಮುಕಿದ್ದರು. ಬಂಗಾಲದಲ್ಲಿಯ ರೈತರ ಚಳವಳಿಯಲ್ಲಿ ಅವರು ಪ್ರತ್ಯಕ್ಷವಾಗಿ ಕಾರ್ಯ ಮಾಡುತಿದ್ದರು. ಬಂಗಾಲ ಪ್ರಾಂತಿಕ ಕಾಂಗ್ರೆಸ್ ಸಮಿತಿಯ ರೈತ ಉಪಸಮಿತಿಯ ಸದಸ್ಯರಾಗಿದ್ದರವರು. ಸ್ಮೃತೀಶರು ಎರಡು ಸಲ ತುರಂಗವಾಸವನ್ನನುಭವಿಸಿದ್ದರು. ಆದರೆ ಶಾಂತಿ ಮತ್ತು ಜಾತೀಯ ಸೌಹಾರ್ದವು ಆತ್ಮಾರ್ಪಣೆಯನ್ನು ಮಾಡಿಸಿದಾಗ ಅವರ ಸ್ವಾರ್ಥತ್ಯಾಗ ಶಿಖರಕ್ಕೆ ಮುಟ್ಟಿತು. ಇಂಥ ಅಪ್ರತಿಮ ಸ್ವಾರ್ಥತ್ಯಾಗಕ್ಕೆ ಅವರು ಯೋಗ್ಯರೇ ಆಗಿದ್ದರು.

ಕಲಕತ್ತಾ ಎನ್. ಕೆ ಬೋಸ
೭—೯—೧೯೪೭

# ವಿಶುದ್ಧ ಸ್ವಾರ್ಥತ್ಯಾಗ

ಶ್ರೀ ಸುಚೀನ ಮಿತ್ರರ ಕೊಲೆಯಲ್ಲಿ ಕಲಕತ್ತೆಯ ಜಾತೀಯತೆಯ ಉನ್ಮಾದವು ತನಗೆ ಗೊತ್ತಿದ್ದರಮಟ್ಟಿಗೆ, ಕೊನೆಯ ಬಲಿಯನ್ನು ತೆಗೆದುಕೊಂಡಿತೆಂದು ಹೇಳಬಹುದು. ಅವರು ಶುದ್ಧ ಅಹಿಂಸಾಧ್ಯೇಯಿಗಳಾಗಿದ್ದು ಅವರ ಬೆಲೆಯನ್ನು ತೆರಲು ಕೂಡ ಕಡುಗಲಿಗಳಂತೆ ಸಿದ್ಧರಾಗಿದ್ದರು.

ಕಳೆದ ವರ್ಷದ ಅಗಸ್ಟ ಮತ್ತು ನವಂಬರ ಗಳಲ್ಲಿ ಕಲಕತ್ತೆಯಲ್ಲಿ ಹಬ್ಬಿದ್ದ ದೊಂಬಿಗಳಲ್ಲಿ ಗಾಂಧಿ ಶಾಂತಿ ಸೇನಾದಳದ ಸದಸ್ಯರೆಂದು ಅವರು ಶಾಂತಿ ಸ್ಥಾಪನೆಗಾಗಿ ಒಳ್ಳೆ ಪ್ರಯತ್ನ ಮಾಡಿದ್ದರು. ಹೀಗಿರುವಾಗ ಇಂದಿನ ದೊಂಬಿಗಳ ಕಾಲದಲ್ಲಿ ಅವರು ಸುಮ್ಮನೆ ಕೂಡ್ರುವುದೆಂತು? ಕಳೆದ ಶುಕ್ರವಾರ ಮೊದಲನೆಯ ತಾರೀಖು ಅವರು ತಮ್ಮ ಮೂವರು ಹಿಂದೂ ಮಿತ್ರರೊಡನೆ ದಾವಾಗ್ನಿಯನ್ನು ನಂದಿಸುವಲ್ಲಿ ತಮ್ಮ ಪಾಲಿನ ಕೆಲಸಮಾಡಲು ಹೊರಟರು. ಅವರು ತಮ್ಮ ಗೂಡ ದಾರಿಯಲ್ಲಿ ಸಿಕ್ಕ ಕೆಲ ಮುಸಲ್ಮಾನ ಮಿತ್ರರನ್ನೂ ಕರೆದುಕೊಂಡು ಹೋದರು. ನಾಖುದಾ ಮಸೀದೆಯ ಹತ್ತರ ಗಂಡಾಂತರದ ಪರಿಸ್ಥಿತಿಯಿದೆ ಅತ್ತ ಹೋಗುವಾ ಎಂದು ಅವರು ಹೇಳಿದ್ದರಿಂದ ಎಲ್ಲರೂ ಆ ಕಡೆಗೇ ಸಾಗಿದರು. ಆದರೆ ಚಿತ್ಪುರ ಬೀದಿ ಮತ್ತು ಕ್ಯಾನಿಂಗ ಸ್ಟ್ರೀಟಿನ ಹತ್ತರ ಮುಸಲ್ಮಾನ ವಿರೋಧಕರ ಗುಂಪೊಂದು ಶಾಂತಿ ತಂಡವನ್ನು ಮುತ್ತಿತ್ತು. ಸುಚೀನ ಮಿತ್ರ ಮತ್ತು ಅವರ ಉಳಿದ ಹಿಂದು ಮಿತ್ರರನ್ನು ಶಾಂತಿ ತಂಡದವರಿಂದ ಕೆಳಗೆ ಜಗ್ಗಿದರು. ಉನ್ಮಾದಗ್ರಸ್ತರಾಗಿದ್ದ ಜನರು ಸುಚೀನ ಮಿತ್ರರನ್ನು ಇರಿದದ್ದಲ್ಲದೆ ಅವರ ಮಿತ್ರರನ್ನು ಒಳಿತಾಗಿ ಗಾಯಗೊಳಿಸಿದರು. ಅವರ ಮುಸಲ್ಮಾನ ಮಿತ್ರರು ಅವರನ್ನುಳಿಸಲು ಪ್ರಯತ್ನಿಸಿದರು. ಅವರಿಗದು ಸಾಧ್ಯವಾಗಲಿಲ್ಲ. ಕೆಲವರಿಗಂತೂ ಗಾಯಗಳೇ ಆದವು. ಮುಸಲ್ಮಾನ ಗೆಳೆಯರು ಸುಚೀನ ಮಿತ್ರರನ್ನು ಪೋಲೀಸ ಜೀಪ ಕಾರೊಂದರಲ್ಲಿ ಆಸ್ಪತ್ರೆಗೆ ಸಾಗಿಸಿದರು. ಅಲ್ಲಿ ಅವರ ಪ್ರಕೃತಿ ಸುಧಾರಿಸುತ್ತ ನಡೆದಿದೆಂದು ಸುದ್ದಿ ಬಂದಿತ್ತು. ಆದರೆ ನಿನ್ನೆ ದಿನ ಅಪರಾಹ್ಣದಲ್ಲಿ ಅವರ ಪ್ರಕೃತಿ ಕೆಡಲಿಕ್ಕಹತ್ತಿತು. ಈ ದಿನ ಮುಂಜಾನೆ ( ತಾ. ೩ ) ಗಾಂಧೀಜಿಯವರು ತಮ್ಮೊಡನೆ ಕಲಕತ್ತೆಗೆ ಬಂದಿದ್ದ ಇಬ್ಬರು ಹುಡುಗಿಯರನ್ನು ಕರೆದು ಆಸ್ಪತ್ರೆಗೆ ಹೋಗಿ ಅವರನ್ನು ನೋಡಿಕೊಂಡು ಬನ್ನಿರೆಂದು ಕಳಿಸಿದರು. ಆದರೆ ಅವರು ಹಾಗೆ ಮಾಡುವ ಮೊದಲೆ ರೋಗಿಯು ಗಾಯಗಳಿಗೆ ಆಹುತಿಯಾದನೆಂಬ ಸುದ್ದಿ ಬಂದಿತು.

ಸುಚೀನ ಮಿತ್ರರ ವಯಸ್ಸು ಕೇವಲ ೩೮. ಸೇವೆಗಾಗಿಯೆ ಅವರು ತಮ್ಮ ಜೀವನವನ್ನು ಮುಡುಪಾಗಿಟ್ಟಿದ್ದರು. ಕಲಕತ್ತಾ ವಿಶ್ವವಿದ್ಯಾಲಯದ ಎಂ. ಎ. ಪದವೀಧರರವರು. ಕಾಂಗ್ರೆಸ ಸಾಹಿತ್ಯದ ಉತ್ಪಾದನೆಗಾಗಿ ಸ್ಥಾಪಿತವಾಗಿದ್ದ 'ಕಾಂಗ್ರೆಸ ಸಾಹಿತ್ಯ ಸಂಘ' ದ ಸದಸ್ಯರಾಗಿದ್ದರು. ೧೯೪೨ ರಲ್ಲಿ ಅವರು ಹಿಂದುಸ್ಥಾನದಿಂದ ಹೊರಡಿರಿ ಎಂಬ ಚಳವಳಿಯಲ್ಲಿ ಧುಮುಕಿದ್ದರು. ಬಿಡುಗಡೆಯನಂತರ ಅವರು 'ವಂಗೀಯ ಛಾತ್ರಸಂಘ' ಎಂಬ ಕಾಂಗ್ರೆಸ್ಸಿನ ವಿಧಾಯಕ ಕಾರ್ಯಕ್ರಮದ ಅಭಿವೃದ್ಧಿಗಾಗಿ ವಿದ್ಯಾರ್ಥಿಗಳ ಸಂಸ್ಥೆಯೊಂದನ್ನು ಸ್ಥಾಪಿಸುವಲ್ಲಿ ಒಳ್ಳೆ ಸಹಾಯ ಮಾಡಿದರು. ಅವರು ಅನೇಕ ಸಲ ಅಲ್ಲಲ್ಲಿ ನಡೆಯುವ ಪ್ರದರ್ಶನಗಳನ್ನೇರ್ಪಡಿಸುತಿದ್ದರು. ಕಳೆದ ಎಪ್ರಿಲ ಕೊನೆಯ ವರೆಗೆ ಅವರು

—೧೦ನೇ ಪುಟಕ್ಕೆ

## ಗಾಂಧೀಜಿಯ ಪತ್ರಿಕಾ ಪ್ರಕಟನೆ

[ ೭ನೇ ಪುಟದಿಂದ ]

ಮಂತ್ರಿಗಳ ಕಡೆಗೆ ಹೋಗದಿದ್ದರೂ ನನ್ನ ಕಡೆಗೆ ಅಥವ ನನ್ನ ಗೆಳೆಯ ಶಾಹೀದ ಸಾಹೇಬರ ಕಡೆಗೆ ನಿಸ್ಸಂಶಯವಾಗಿ ಬರಬಲ್ಲರು. ಮುಸಲ್ಮಾನ ಪೂರು ಷರಿಗೂ ಇದೇ ಮಾತು ಅನ್ವಯಿಸುತ್ತದೆ. ಸುಧಾರಿಸಿದ ಸಮಾಜದ ಮೂಲಭೂತ ನಿಯಮ ವನ್ನು ಅನುಸರಿಸಿದ್ದರೆ ಕಲಕತ್ತೆಯಲ್ಲಿ ಇಲ್ಲವೆ ಬೇರೆ ಯಾವದೇ ಸ್ಥಳದಲ್ಲಿ ಶಾಂತಿಯನ್ನು ಸ್ಥಾಪಿಸುವ ಬೇರೆ ಮಾರ್ಗವಿಲ್ಲ. ಪಂಜಾಬ ಇಲ್ಲವೆ ಹಿಂದುಸ್ತಾನದ ಹೊರಗಿನ ಬೇರೆ ಸ್ಥಳದಲ್ಲಿಯ ಪಾಶವೀ ಕೃತ್ಯಗಳನ್ನು ಅವರು ನೆನಸುವದು ಬೇಡ. ಯಾರೂ ಮನಬಂದಂತೆ ವರ್ತಿಸ ಬಾರದೆಂಬ ಸರ್ವಮಾನ್ಯ ತತ್ವಕ್ಕೆ ಯಾವದೇ ಬಗೆಯ ಅಪವಾದವಿರುವದಿಲ್ಲೆಂಬುದು ಸ್ಪಷ್ಟ ವಿದೆ.

ಪಾಟಿಣಾದಲ್ಲಿಯ ನನ್ನ ಕಾರ್ಯದರ್ಶಿ ದೇವಪ್ರಕಾಶರು "ಪಂಜಾಬದಲ್ಲಿಯ ಘಟನೆಗ ಳಿಂದ ಸಾರ್ವಜನಿಕರಲ್ಲಿ ಕಳವಳವುಂಟಾಗಿದೆ. ಪತ್ರಿಕೆಗಳ ಕರ್ತವ್ಯವನ್ನು ನಿರ್ದೇಶಿ ಸುವ ಪ್ರಕಟನೆ ಹೊರಡಿಸುವದವಶ್ಯವೆಂದು ನನಗನಿಸುತ್ತದೆ" ಎಂದು ತಂತಿ ಕೊಟ್ಟಿರುವರು. ದೇವ ಪ್ರಕಾಶರು ಎಂದೂ ನಿರರ್ಥಕವಾಗಿ ಭಾವೋದ್ರಿಕ್ತರಾಗುವದಿಲ್ಲ. ಪತ್ರಿಕೆಗಳಲ್ಲಿ ಕೆಲ ಅಸಮಂಜಸ ಮಾತುಗಳು ಬಂದಿರಲಿಕ್ಕೆ ಬೇಕು.

ಅರಗಿನ ಮನೆಯಲ್ಲಿ ವಾಸ ಮಾಡುತಿರುವಂಥ ಸದ್ಯದ ಗಂಡಾಂತರ ಪರಿಸ್ಥಿತಿಯಲ್ಲಿ ಪತ್ರಿಕೆಗಳು ಹೆಚ್ಚು ಜಾಣ ಮತ್ತು ಮಿತಲೇಖಕರಾಗಿರ ಬೇಕು. ಅನ್ಯಾಯವು ಹೊತ್ತಿದ ಕಡ್ಡಿಯಂತೆ ಪರಿ ಣಮಿಸುತ್ತದೆ. ಆದುದರಿಂದ ಪ್ರತಿಯೊಬ್ಬ ಸಂಪಾದಕ ಮತ್ತು ಸುದ್ದಿಗಾರ ತನ್ನ ಕರ್ತವ್ಯ ವನ್ನು ಪೂರ್ಣವಾಗಿ ತಿಳಿದುಕೊಳ್ಳುವನೆಂದು ಆಶಿಸುತ್ತೇನೆ.

ಒಂದು ಮಾತನ್ನು ನಾನು ಹೇಳಲಿಕ್ಕೆ ಬೇಕು. ಪಂಜಾಬಿಗೆ ಅವಸರದ ಸಂದೇಶವನ್ನು ನನಗೆ ಕೊಡಬೇಕಾಗಿದೆ. ಕಲಕತ್ತೆಯಲ್ಲಿ ಗೊಂದಲ ಮತ್ತೆ ಏಳುವ ಸುದ್ದಿ ಸಂಗತಿಗಳ ಸುಳಿವು ನನಗೆ ಬರಹತ್ತಿದೆ. ಅವು ಪೂರ್ಣ ನಿರಾಧಾರವಾ ಗಿರದಿದ್ದರೂ ಅತಿಶಯೋಕ್ತಿ ಪೂರ್ಣವಾಗಿವೆಂದು ಆಶಿಸುತ್ತೇನೆ. ಕಲಕತ್ತೆಯಲ್ಲಿ ಎಲ್ಲವೂ ಸರಿ ಹೋಗುವದು ಮತ್ತು ಒಮ್ಮೆ ಸ್ಥಾಪಿತವಾದ ಶಾಂತಿಭಂಗವಾಗಲಿಕ್ಕಿಲ್ಲೆಂದು ಕಲಕತ್ತೆಯ ನಾಗರಿಕರು ನನಗೆ ಪುನಃ ಆಶ್ವಾಸನ ಕೊಡ ಬೇಕಾಗಿದೆ.

### ಶಾಂತಿಯೇನು ಮೋಡಿಯಲ್ಲ

ಶಾಂತಿಯು ಪ್ರಥಮ ದಿನದಿಂದ ಅಂದರೆ ಕಳೆದ ಅಗಸ್ಟ ೧೪ ರಿಂದ ಈ ಶಾಂತಿ ಕೇವಲ ತಾತ್ಪೂ ರ್ತಿಕವಾಗಬಹುದೆಂದು ನಾನು ಹೇಳುತ್ತಲೆ ಬಂದಿದ್ದೇನೆ.ಶ್ರಿ ಅದರಲ್ಲೇನು ಮೋಡಿಯಿರಲಿಲ್ಲ. ಭಾವೀ ಅನಿಷ್ಟ ಸೂಚನೆ ನಿಜವಾಗಿ ಪರಿಣಮಿಸಿ ಕಲಕತ್ತೆ ಮತ್ತೆ ಪಾಶವೀ ವೃತ್ತಿಗೆ ಎಳೆಸ ಬಹುದೊ? ಹಾಗಾಗದಿರಲೆಂದು ಆಶಿಸುವಾ. ಪರಮಾತ್ಮನು ನಮ್ಮ ಹೃನ್ಮಂದಿರವನ್ನು ಮುಟ್ಟಿ ಹುಚ್ಚಾಟದ ಪುನರಾವೃತ್ತಿಯಾಗದಂತೆ ನಮ್ಮನ್ನು ಅನುಗ್ರಹಿಸಲೆಂದು ಪ್ರಾರ್ಥಿಸುವಾ.

ಮೇಲೆ ಹೇಳಿದುದೆಲ್ಲ ಬರೆಯುವದಾದ ಮೇಲೆ ಅಂದರೆ ಸುಮಾರು ೪ ಗಂಟೆಯ ಹೊತ್ತಿಗೆ ನಗ ರದ ಬೇರೆ ಬೇರೆ ಭಾಗಗಳಲ್ಲಿ ಏನೇನೊ ಸಂಭವಿ ಸಿರೆಂಬದರ ವಿವರಗಳು ನನ್ನ ಕೈಸೇರಿವೆ. ನಿನ್ನೆ ವರೆಗೆ ಸುರಕ್ಷಿತವಾಗಿದ್ದ ಕೆಲ ಸ್ಥಳಗಳು ಅರಕ್ಷಿತ ವಾಗಿವೆ. ಅನೇಕ ಮರಣಗಳು ಸಂಭವಿಸಿವೆ. ತೀರ ದರಿದ್ರರಾದ ಇಬ್ಬರು ಮುಸಲ್ಮಾನ ಶವ ಗಳನ್ನು ನಾನು ನೋಡಿದೆನು. ದೀನ ದರಿದ್ರರಂತೆ ಕಾಣುವ ಕೆಲ ಮುಸಲ್ಮಾನರನ್ನು ಸುರಕ್ಷಿತ ಸ್ಥಳಕ್ಕೆ ಮುಟ್ಟಿಸುತಿರುವದನ್ನು ನಾನು ನೋಡಿದೆ. ಮೇಲೆ ಇಷ್ಟೊಂದು ಪೂರ್ಣವಾಗಿ ವಿವರಿಸಿದ ನಿನ್ನಿನ ಘಟನೆಗಳು ಈಗಿದ್ದ ದಾವಾಗ್ನಿಯ ಮುಂದೆ ನಿಸ್ತೇಜವಾಗಿ ಕಾಣುವವು. ಈ ದಾವಾ ಗ್ನಿಯನ್ನು ಪ್ರತ್ಯಕ್ಷ ಹೋಗಿ ನಾನು ನಿಲ್ಲಿಸುವ ಪ್ರಯತ್ನ ಮಾಡುವುದರಿಂದ ಯಾವ ಕ್ರಿಯೋ ಜನವೂ ಉಂಟಾಗದು.

ಸಾಯಂಕಾಲ ನನ್ನನ್ನು ಕಾಣಲು ಬಂದ ಗೆಳೆ ಯರಿಗೆ ಅವರ ಕರ್ತವ್ಯವಾವುದೆಂಬದನ್ನು ತಿಳಿಸಿ ಕೊಟ್ಟಿರುವೆ. ಪೂರ್ವ ಪಂಜಾಬವು ಈ ಕೆಲ ದಿನ ಗಳಲ್ಲಿ ಏನು ಮಾಡಿದೆಂಬದನ್ನು ಶೀಖರು ಮತ್ತು ಹಿಂದುಗಳು ಮರೆಯತಕ್ಕದ್ದಲ್ಲ. ಈಗ ಪಶ್ಚಿಮ ಪಂಜಾಬದಲ್ಲಿಯ ಮುಸಲ್ಮಾನರು ಹುಚ್ಚಾಟ ವನ್ನು ಪ್ರಾರಂಭಿಸಿರುವರು. ಪಂಜಾಬದಲ್ಲಿಯ ಘಟನೆಗಳಿಗಾಗಿ ಶೀಖರು ಮತ್ತು ಹಿಂದುಗಳು ರೊಚ್ಚಿಗೆದ್ದಿರುವರೆಂದು ಹೇಳಲಾಗುತ್ತದೆ.

ಪಂಜಾಬಕ್ಕೆ ನಾನು ಹೋಗಿ ಅಲ್ಲಿನ ಜನರಿಗೆ ಸಹಾಯ ಸಲ್ಲಿಸಬೇಕೆಂದು ಕಲಕತ್ತೆಯ ಜನರು ಬಯಸುತಿದ್ದರೆ, ಅವರು ಬೇಗ ನನ್ನ ಉಪೋಷ ಣದ ಕಾರಣೆಯನ್ನು ನಾನು ಮಾಡುವಂತೆ ಅವರು ನನ್ನನ್ನು ಸಮರ್ಥನನ್ನಾಗಿ ಮಾಡಬೇಕು.

ಕಲಕತ್ತಾ
೧–೯–೪೭.

# 'ಗಾಂಧೀಜಿಯ ಪ್ರಾರ್ಥನೋತ್ತರ ಭಾಷಣಗಳು.

ಕಲಕತ್ತಾ ೩೧–೮–೪೭

### ಶ್ರೀಮಂತರ ಕರ್ತವ್ಯ

ಗಾಂಧೀಜಿ ಮತ್ತು ಶಾಹೀದ ಸಾಹೇಬರು ಮೊದಲು ಶ್ರೀಮಂತ ಹಿಂದ್ವೇತರರನ್ನು ಮುಸ ಲ್ಮಾನರನ್ನು ಮತ್ತು ಯುರೋಪಿಯನ್‌ರನ್ನು ಗ್ರಾಂಡ ಹಾಟಲಿನಲ್ಲಿ ಭೆಟ್ಟಿಯಾಗಿ ವಿನಾಶ ಗೊಳಿಸಲ್ಪಟ್ಟ ಬಸ್ತಿಗಳನ್ನು ಮತ್ತು ಉಳಿದ ಕಟ್ಟಡಗಳನ್ನು ಮತ್ತೆ ಕಟ್ಟುವದಕ್ಕಾಗಿ ಬೇಕಾದ ಹಣವನ್ನು ಕೊಡಬೇಕೆಂದು ಬಿನ್ನವಿಸಿ ಕೊಂಡರು. ಒಂದು ಗಂಟೆಯ ಕಾಲ ಅಲ್ಲಿದ್ದ ಬಳಿಕ ಅವರು ಬೇಗಮಾರಿ ಪಾರ್ಕಿನಲ್ಲಿ ಪ್ರಾರ್ಥನೆ ಗಾಗಿ ಬಂದರು. ಶ್ರೀಮಂತರೆದುರಿಗೆ ಅವರು ಮಾಡಿದ ಭಾಷಣದಲ್ಲಿ ತಾವು ಅವರೆಡೆಗೆ ಭಿಕ್ಷುಕ ರಾಗಿ ಹೋಗಿದ್ದೇವೆಂದು ಗಾಂಧೀಜಿ ನುಡಿದರು. 'ನಾನು ನನ್ನ ಅಭ್ಯಾಸ ಮುಗಿಸಿ ಜೀವನವನ್ನು ಪ್ರಾರಂಭ ಮಾಡಿದಾಗಿನಿಂದಲೆ ಅದು ಹೇಗೋ ನನ್ನಲ್ಲಿ ಶ್ರೀಮಂತ ದರಿದ್ರರಿಬ್ಬರಲ್ಲಿಯೂ ಭಿಕ್ಷೆ ಬೇಡುವ ಹಿಡಿತವುಂಟೆಂದು ನನಗೆ ಕಂಡುಬಂತು. ನನ್ನ ಬಿನ್ನಹವೇನೂ ನಿರರ್ಥಕವಾಗಲಾರದೆಂದು ನನ್ನ ಆಸೆ. ಪುನರ್ರಚನೆ ಮತ್ತು ಪುನರ್ನಿವೇಶ ನದ ಎರಡು ಮಾರ್ಗಗಳಿರುವವು. ಸರಕಾರದವ ರಾದರೂ ಹಣವನ್ನು ಪೂರಯಿಸಬೇಕು; ಇಲ್ಲವೆ ಕಲಕತ್ತೆಯ ಶ್ರೀಮಂತರು ಹಣವನ್ನು ಕೊಡ ಬೇಕು. ಅದರೆ ಶ್ರೀಮಂತರು ಈ ಕರ್ತವ್ಯವನ್ನು ಕೈಕೊಂಡದ್ದಾದರೆ ಮತ್ತಷ್ಟು ಒಳಿತಾದುದು. ನಾಗರಿಕರೆಂದು ಅವರು ಸ್ವಯಂ ತಮ್ಮ ಕರ್ತವ್ಯ ಮಾಡಿದ್ದಾದರೆ ಜಾತಿ ಜಾತಿಗಳಲ್ಲಿ ನಿಜವಾದ ಮಿತ್ರತ್ವದ ಸ್ಪಷ್ಟ ನಿದರ್ಶನವಾದಂತಾಗುವದು.

ಪ್ರದರ್ಶನಾತ್ಮಕ ಸಭೆಗಳ ಅವಶ್ಯಕತೆ ಯೇನೋ ಇದೆ. ಆದರೆ ಅವೇ ಸಾಲದು. ಕಾಯಂ ಮಿತ್ರತ್ವಕ್ಕೆ ಸಹಾಯಕವಾದುದು ಸಂತೃಪ್ತ ಪುನರ್ನಿವೇಶನ. ಎಲ್ಲ ಪಕ್ಷಗಳು, ಎಲ್ಲ ಗುಂಪುಗಳು ಆ ದಿಸೆಯಲ್ಲಿ ಕೆಲಸ ಮಾಡತಕ್ಕದ್ದು. ಹೃದಯ ಶುದ್ಧಿಗಾಗಿ ಹಿಂದಿನದನ್ನೆಲ್ಲ ಎಲ್ಲರೂ ಮರೆಯತಕ್ಕದ್ದು. ಯೋಗ್ಯರೀತಿಯಿಂದ ಸಂಪಾದಿಸಿದ ಮರವು ದೊಡ್ಡದೊಂದು ಕಾಣಿಕೆ. ಸೃಷ್ಟಿಕರ್ತನು ಮಾನವನಿಗೆ ಕೊಟ್ಟ ಶ್ರೇಷ್ಠವಾದ ಕಾಣಿಕೆಯದು. ಹಿಂದಿನದನ್ನು ಮರೆಯುವ ಕಲೆಯನ್ನು ಕಲಿಯದಿದ್ದರೆ ಶ್ರೀಮಂತರು ತಮ್ಮ ಕಿಸೆಯಲ್ಲಿ ಕೈಹಾಕಲಾರರು. ಶಾಹೀದ ಸಾಹೇಬರ ನಂತರ ಅವರು ಅಷ್ಟರಲ್ಲಿ ಹೊರಟು ಹೋಗಿದ್ದರು; ಶ್ರೀಮಂತರಿಗೆ ಒತ್ತಟ್ಟಿಗೆ ಕುಳಿತುಕೊಳ್ಳಿರೆಂದೂ ಒಳ್ಳೆ ನಿರ್ಣಯಕ್ಕೆ ಬರುವ ವರೆಗೆ ಅಲ್ಲಿಂದ ಹೊರಟಿದ್ದು ಹೋಗಬಾರ ದೆಂದೂ ಗಾಂಧೀಜಿ ಕೇಳಿಕೊಂಡರು.

### ಮುಸ್ಲಿಮರ ಸತ್ಕಾರ್ಯ

ಅನಂತರ ತಂಡವೆಲ್ಲ ಬೇಗಮಾರಿ ಪಾರ್ಕಿಗೆ ಹೋಯಿತು. ಅಲ್ಲಿ ಪ್ರಾರ್ಥನೆ ಸಭೆ ನಡೆಯುವ ದಿದ್ದಿತು.ಪ್ರಾರ್ಥನಾನಂತರ ಗಾಂಧೀಜಿ ಹೇಳಿದ್ದು ಶ್ರೀಮಂತರ ಸಭೆಯಲ್ಲಿ ನಾನು ಮಾತಾಡಿರುವೆ ನಾದ್ದರಿಂದ ಈ ಸಭಿಕರಿಗೆ ಹೆಚ್ಚಿಗೇನೂ ಹೇಳ ಬಯಸುವದಿಲ್ಲ. ಎರಡೂ ಜಾತಿಯವರಲ್ಲಿ ಈಗ ಸಂಪೂರ್ಣ ಮಿತ್ರತ್ವವಿದೆಂದೂ ಗುಳೆಹೋದ ವರು ತಿರುಗಿ ಬರಲು ಸಿದ್ಧರಾಗಿರುವರೆಂದೂ ನಿಮ್ಮ ಎಂ. ಎಲ್. ಎ. ಗಳಾದ ಕಮಲಬಾಬು ಇವರು ಹೇಳಿದ್ದನ್ನು ಕೇಳಿ ನನಗೆ ಸಂತೋಷ. ಆದರೆ ಯಾವ ಕಾರಖಾನೆಗಳಲ್ಲಿ ದುಡಿದು ಜನರು ತಮ್ಮ ಉಪಜೀವನವನ್ನು ಸಾಗಿಸುತ್ತಿದ್ದರೊ ಆ ಕಾರಖಾನೆಗಳಿನ್ನೂ ಸುರುವಾಗದಿದ್ದುದು ತೊಂದರೆಯುಂಟುಮಾಡಿದೆ. ಮುಸಲ್ಮಾನ ನೆರೆ ಯವರು ಗುಳೇ ಹೋದವರ ಬಿಡಾರಗಳನ್ನೆಲ್ಲ ಪುನರ್ರಚಿಸಲು ಕೈಕೊಂಡಿರುವರು. ವರದಿ ಮಾಡಿದ್ದ ಸುದ್ದಿಯೆಲ್ಲ ನಿಜವಾಗಿದ್ದರೆ, ಆ ಸತ್ಯವು ಕಲಕತ್ತೆಯ ಪೀಡಿತ ಪ್ರದೇಶದಲ್ಲೆಲ್ಲ ತನ್ನ ಕಾರ್ಯವನ್ನು ಮಾಡಬಲ್ಲದು. ಮಂಗಳವಾರ ನಾನು ನವಖಾಲಿಗೆ ಹೊರಡಬೇಕೆಂದು ಮಾಡಿ ರುವೆ. ಶಾಹೀದ ಸಾಹೇಬರಿಗೂ ಅಂದು ಹೊರೆ ಡಲು ಶಕ್ಯವಾದರೆ ಅವರೂ ನನ್ನೊಡನೆ ಬರು ವರು. ಬಹಳ ದಿನ ನಾನು ನವಖಾಲಿಯಲ್ಲಿ ಇರ ಬಯಸುವದಿಲ್ಲ, ಕಲಕತ್ತೆಯಲ್ಲಿ ಪ್ರಾರಂಭಿಸಿದ ಸತ್ಕಾರ್ಯವನ್ನು ಪರಿಪೂರ್ಣಗೊಳಿಸಲು ಬೇಗ ಮರಳುವೆ. ಆದರೆ ಮಧ್ಯಂತರ ಅವಧಿಯಲ್ಲಿ ಪುನರ್ನಿಯೋಜನೆಯ ಕಾರ್ಯ ಇಮ್ಮಡಿ ಹುರುಪಿ ನಿಂದ ಮುಂದುವರಿಯಲಿ. ಶಾಶ್ವತ ಶಾಂತಿ ಬೇಕಾಗಿದ್ದರೆ ಆ ಕಾರ್ಯವನ್ನು ಅಲಕ್ಷಿಸಲಾಗದು.

ಕಲಕತ್ತಾ, ೬–೯–೪೭

ಡೆಪ್ಯುಟಿ ಮೇಯರರ ಭಾಷಣದತ್ತ ಹೊರಳಿ ಗಾಂಧೀಜಿ 'ಅಸ್ಪೃಶ್ಯ' ಎಂಬ ಶಬ್ದವು ತಪ್ಪಾಗಿ ಬಳಸಲ್ಪಟ್ಟಿತೆಂದರು. ಗಾಂಧೀಜಿಯು ತಮ್ಮ ಕಾಯಂ ಮನೆಯಾದ ಸೋದೇಪುರದ ಖಾದಿ ಪ್ರತಿಷ್ಠಾನದಲ್ಲಿ ಈಗ ವಾಸಿಸುತ್ತಿಲ್ಲ; ಸದ್ಯಕ್ಕೆ ಅವರು ಬೇಲಿಯಾಘಾಟದಲ್ಲಿ ತಮ್ಮ ಕಲಕತ್ತದ ಮುಸ್ಲಿಂ ಗೆಳೆಯರಲ್ಲಿ ಉಳಿದುಕೊಂಡಿದ್ದಾರೆ, ತಮ್ಮ ಆರೈಕೆಗೆಂದು ಹೇಮ ಪ್ರಭಾದೇವಿ ಮತ್ತು ಅವಳ ಸಹೋದ್ಯೋಗಿಗಳನ್ನು ಕೂಡ ಗಾಂಧೀಜಿ ತಮ್ಮ ಹೊಸ ವಾಸಸ್ಥಳಕ್ಕೆ ಬರಗೊಡುತ್ತಿಲ್ಲ. ತಮಗೆ ಸೇವಾರೂಪದಲ್ಲಿ ತಮ್ಮ ಮುಸ್ಲಿಂ ಗೆಳೆಯರೇನು ಸಲ್ಲಿಸುವರೋ ಅದೇ ಸಾಕೆಂದರು. ಗಾಂಧೀಜಿಯೇನೂ ತಪ್ಪು ಮಾಡಿಲ್ಲ. ದಕ್ಷಿಣ ಆಫ್ರಿಕದಲ್ಲಿ ಮುಸ್ಲಿಮರ ಮನೆಗಳಲ್ಲಿ ಸುಖವಾಗಿ ಇರುವ ಅಭ್ಯಾಸ ಅವರಿಗಿತ್ತು.

### ಶಾಹೀದ ಸಾಹೇಬರು

ಗಾಂಧೀಜಿ ಅನಂತರ ಸುಚೀನ ಮಿತ್ರ ಮತ್ತು ಸ್ಮೃತೀಶ ಬ್ಯಾನರ್ಜಿಯವರ ಅಮರ ಕಾರ್ಯವನ್ನು ಪ್ರಸ್ತಾವಿಸಿದರು. ಅವರು ಅದಕ್ಕೆ ವ್ಯಥೆ ಪಡಲಿಲ್ಲ. ಅಂತಹ ಮುಗ್ಧರ ಸಾವು ಎರಡೂ ಜಾತಿಗಳನ್ನು ಒಟ್ಟಗಿಡಲು ಅವಶ್ಯಕ ವಾದದ್ದು. ಹಿಂದುಗಳೊಳಗೆ ಮಾತ್ರ ಅಂತಹ ಅಮರ ಕಾರ್ಯಪಟುಗಳಿರುತ್ತಾರೆಂದು ಅವರು ತಿಳಿಯದಿರಲಿ. ಹಿಂದುಗಳ ರಕ್ಷಣಾ ಕಾರ್ಯದಲ್ಲಿ ಮಾಡಿದ ಅನೇಕ ಮುಸಲಮಾನರನ್ನು ಅವರು ಉದಾಹರಿಸಬಲ್ಲವರಾಗಿದ್ದರು. ಅವರಿಗೆ ಅಂತಹ ಅನುಭವ ಜೀವನದಲ್ಲಿ ಉಂಟಾಗಿತ್ತು. ಎಲ್ಲ ಜಾತಿ ಪಂಗಡಗಳಲ್ಲೂ ಒಳ್ಳೆಯದು ಕೆಟ್ಟದೆರಡೂ ಇವೆ. ಈ ಮಾತು ಅವರಿಗೆ ಶಾಹೀದ ಸಾಹೇಬರನ್ನು ನೆನಪಿಗೆ ತಂದು ಕೊಟ್ಟಿತು. ಅವರನ್ನು (ಶಾಹೀದ ಸಾಹೇಬರನ್ನು) ತಮ್ಮ ಕಾರ್ಯದಲ್ಲಿ ಸಹಕಾರ್ಯಕರ್ತರನ್ನಾಗಿ ಗಾಂಧೀಜಿ ತೆಗೆದು ಕೊಂಡದ್ದು ಹುಚ್ಚುತನವೇ ಸರಿಯೆಂದು ಗಾಂಧೀ ಜಿಗೆ ಅನೇಕ ಪತ್ರಗಳು ಬಂದಿದ್ದವು. ಮತ್ತು ಅನೇಕರು ಸ್ವತಃ ಬಂದು ಹೇಳುತ್ತಿದ್ದರು. ಗಾಂಧೀಜಿ ತಾವು ಹುಚ್ಚರಲ್ಲವೆಂಬುದನ್ನು ಹೇಳ ಲೇಬೇಕಾಗಿ ಬಂದಿತು. ತಾವೇನುಮಾಡುತ್ತಿರುವೆ ವೆಂಬುದು ಅವರಿಗೆ ಗೊತ್ತು. ಹಿಂದೆ ಶಾಹೀದ ಸಾಹೇಬರು ಮಾಡಿದ ಕೃತ್ಯಗಳಿಗೂ ಅವರಿಗೂ (ಗಾಂಧೀಜಿಗೂ) ಏನೂ ಸಂಬಂಧವಿಲ್ಲ. ಆದರೆ ಅವರಿಬ್ಬರೂ ಒಟ್ಟಗಿದ್ದ ಎಲ್ಲ ಅಮೂಲ್ಯ ದಿನ ಗಳಲ್ಲೂ ಶಾಹೀದ ಸಾಹೇಬರು ತಮ್ಮೊಡನೆ ಸಹಕ ರಿಸಿ ನಡೆಯುತ್ತಿದ್ದಾರೆಂಬುದಕ್ಕೆ ತಾವೇ ಸಾಕ್ಷಿ ಯೆಂದು ಗಾಂಧೀಜಿ ಹೇಳಿದರು.

ಶಾಹೀದಸಾಹೇಬರ ಅಮೂಲ್ಯ ಸಹಾಯವಿಲ್ಲ ದಿದ್ದರೆ ತಾವು ಅವರ (ಕಲಕತ್ತದ ಜನಗಳ ಮಧ್ಯದಲ್ಲಿರುತ್ತಿರಲಿಲ್ಲವೆಂದು ಗಾಂಧೀಜಿ ಹೇಳಿ ದರು. ಹೃತ್ಪೂರ್ವಕವಾಗಿ ಶಾಹೀದಸಾಹೇಬರು ಮಾಡಲೆಳಸಿದ ಕಾರ್ಯದ ಹಿಂದೆ ಯಾವುದಾದ ರೊಂದು ನೀಚೋದ್ದೇಶವಿದೆಯೆಂದು ತರ್ಕಿಸು ವುದು ಬುದ್ಧಿಶಕ್ತಿಗೆ ಅವಮಾನ ಮಾಡಿದಂತೆಯೇ ಸರಿ ಎಂದು ಅವರು ಅಭಿಪ್ರಾಯಪಟ್ಟರು.

ಕೊನೆಯಲ್ಲಿ ದೂರು ತಂದವರು ಅಂತಹ ಅವಿ ಶ್ವಾಸದ ಅಸಹ್ಯ ಪರಿಣಾಮಗಳನ್ನಾದರೂ ವಿಚಾ ರಿಸಲಿ. ಅದು ಇಂದಿನ ಐಕ್ಯವನ್ನು ಹಾಳ್ಮಾ ಮಾಡುವುದಲ್ಲದೆ ಮತ್ತು ಹಾಗೆ ಮಾಡಿ ಭ್ರಾತೃ ಹತ್ಯೆಯಿಂದ ಪಂಜಾಬನ್ನು ಸಂರಕ್ಷಿಸಲು ಏಕ ಮಾತ್ರ ಉಪಾಯವಾಗಬಹುದಾದ್ದನ್ನು ಭಂಗ ಪಡಿಸಿದಂತಾಗುತ್ತದೆ.

## ಮೂಲ ಮತ್ತು ಫಲ

ಮೊನ್ನೆ ದಿನ ಆಂಗ್ಲ ಪತ್ರಿಕಾಕರ್ತನೊಬ್ಬ ಬೆಲೆಯಾಘಾಟಕ್ಕೆ ಬಂದಿದ್ದ. ಗಾಂಧೀಜಿಗೆ ಅದು ಒಳ್ಳೆ ಗಡಿಬಿಡಿಯ ದಿನವಾಗಿದ್ದಿತು. ಅದು ದರಿಂದ ಆ ಆಂಗ್ಲ ಮಿತ್ರನಿಗಾಗಿ ಕೆಲನಿಮಿಷ ಗಳನ್ನು ಮಾತ್ರ ಕೊಟ್ಟರು. ಆ ಅಕ್ಕಲ್ಪ ಸಂದ ರ್ಶನದಲ್ಲಿ ಒಂದು ಪ್ರಶ್ನೆ ಎತ್ತಲ್ಪಟ್ಟು ಚರ್ಚಿಸ ಲಾಯಿತು. ಅದನ್ನು ವಾಚಕರಿಗೆ ನಿವೇದಿಸ ಬಯಸುವೆ.

ಗಾಂಧೀಜಿಯವರ ಚಟುವಟಿಕೆಗಳು ವ್ಯಾಪಕ ಸಾಮಾಜಿಕಮತ್ತು ರಾಜಕೀಯ ಕ್ಷೇತ್ರಗಳನ್ನು ಹಿಡಿದುಅತಿ ಚಿಲ್ಲರೆ ಮತ್ತು ತೀರ ವೈಯಕ್ತಿಕ ಕ್ಷೇತ್ರಗಳನ್ನು ವ್ಯಾಪಿಸುತಿದ್ದರೂ ಇಷ್ಟೊಂದು ಆಶ್ಚರ್ಯಕಾರಕವಾದ ರೀತಿಯಲ್ಲಿ ನಿರ್ಲಿಪ್ತ ಹೇಗೆ ಉಳಿಯುವರೆಂದು ಗಾಂಧೀಜಿಗೆ ಆ ಆಂಗ್ಲ ಮಿತ್ರ ಪ್ರಶ್ನಿಸಿದನು. ಗಾಂಧೀಜಿ ಉತ್ತರಿಸಿದ್ದು: "ನಾನೆಂದೂ ತೂಕ ತಪ್ಪುವುದಿಲ್ಲೆಂಬುದು ನಿಜ ವಲ್ಲ. ಅಂಥ ಪ್ರಸಂಗಗಳು ಮಾತ್ರ ಕಡಿಮೆ. ಆದರೂ ಬಹಳ ದಿನಗಳ ವರೆಗೆ ಆತ್ಮ ಸಂಯಮ ವನ್ನು ಆಚರಿಸಿದ್ದರ ಮೂಲಕ ಪರಮಾತ್ಮನ ದಯೆಯಿಂದ ನನ್ನ ಕೋಪತಾಪಗಳನ್ನು ಬಹಳ ಹಿಡಿತದಲ್ಲಿಟ್ಟುಕೊಳ್ಳಲು ನಾನು ಸಮರ್ಥನಾಗಿರು ವೆನು.

ಗಾಂಧೀಜಿಯವರ ಈ ಬಗೆಯ ಉತ್ತರದಿಂದ ಹೆಚ್ಚು ಮೂಲಭೂತ ಪ್ರಶ್ನೆಗೆ ಆ ಸಂದರ್ಶಕ ಹೊರಳಿದ. ಗಾಂಧೀಜಿಯವರ ಚಟುವಟಿಕೆಗಳ ಮೂಲವೆಲ್ಲ ಮೋಕ್ಷಾರ್ಥಿಯಾಗಿದೆಂಬುದನ್ನು ಅವರ ಬರಹಗಳಿಂದ ಈ ಆಂಗ್ಲಮಿತ್ರನು ತಿಳಿ ದುಕೊಂಡಿದ್ದನು. ಇದನ್ನು ಸಾಕಷ್ಟು ಪ್ರಮಾಣ ದಲ್ಲಿ ಏಕೆ ಅವರು ಒತ್ತಿ ಹೇಳಲಿಲ್ಲ?

ಗಾಂಧೀಜಿಯವರು ನಸುನಗುತ್ತ ಉತ್ತರಿಸಿ ದರು. ಮೋಕ್ಷಾಪೇಕ್ಷೆ ಇದ್ದುದು ನಿಜ.ಆದರೆಬೇರೆ ಯಾರ ಸಲುವಾಗಿಯೂ ಅದು ಇರದೆ ವ್ಯಕ್ತಿಶಃ ನನಗಾಗಿಯೇ ಇರುವದು. ಜಗತ್ತು ಫಲವನ್ನಪೇ ಕ್ಷಿಸುತಿದೆಯಲ್ಲದೆ ಮೂಲವನ್ನಲ್ಲ. ಆದರೆ ಗಿಡವು ಮಾತ್ರ ಫಲಗಳ ಬಗ್ಗೆ ಹೆಚ್ಚುದಕ್ಷತೆ ವಹಿಸದೆ ಮೂಲದ ಬಗ್ಗೆಯೆ ಕಾಳಜಿತೆಗೆದುಕೊಳ್ಳುತ್ತದೆ. ಪ್ರತಿಯೊಂದು ವ್ಯಕ್ತಿಯೂ ತನ್ನ ಜೀವನದ ಮೂಲದ ಬಗ್ಗೆಯೆ ಹೆಚ್ಚಾಗಿ ಚಿಂತನೆ ಮಾಡಬೇ ಕಾದುದು ಕರ್ತವ್ಯವಾಗಿದೆ. ಸ್ವಂತ ಪರಿಶ್ರಮ ಮತ್ತು ಕಷ್ಟ ನಿಷ್ಠುರಗಳನ್ನುಸಹಿಸಿಅದನ್ನು ಬೆಳೆ ಸಬೇಕು. ಮೂಲವೇ ನನ್ನ ಮುಖ್ಯ ವಿಷಯ. ಆದರೆ ಸಮಾಜವು ಫಲವನ್ನಷ್ಟೇ ಬಯಸುತ್ತದೆ. ಫಲಗಳ ಹೊರತು ಬೇರೆ ಯಾವ ಸಾಧನ ಸಂಪತ್ತು ಇಲ್ಲವೆ ನಿರ್ಣಯವೂ ಅದಕ್ಕೆ ಲಭ್ಯವಾಗಿಲ್ಲ. ಹಣ್ಣುಗಳಿಂದ ಗಿಡವನ್ನು ಚೆನ್ನಾಗಿ ನಿರ್ಣಯಿಸ ಬಹುದಲ್ಲವೆ?

ಈ ರೀತಿಯಾಗಿ ಫಲದ ಕಡೆಗೆ ಹೆಚ್ಚು ಗಮನಕೊಡದೆ ಮೂಲವನ್ನುದ್ದೇಶಿಸಿಯೆ ಗಾಂಧೀ ಜಿಯವರು ತಮ್ಮ ವ್ಯವಹಾರವನ್ನು ಸಾಗಿಸಿದ್ದ ರಿಂದ ಆಂಗ್ಲ ಮಿತ್ರರು ಗಾಂಧೀಜಿಯವರಲ್ಲಿ ನಿರ್ಲಿಪ್ತ ಭಾವವನ್ನು ಕಾಣುತಿರುವದು. ಆದರೆ ವ್ಯಕ್ತಿಶಃ ಗಾಂಧೀಜಿಯವರು ತಮ್ಮ ಧ್ಯೇಯ ಸಾಧನೆಯಿಂದ ಇನ್ನೂ ಬಹಳ ದೂರ ಇರುವರು. ಇನ್ನೂ ಸಂಪೂರ್ಣ ಮುಕ್ತಿಗಾಗಿ ಪರಿತಪಿಸುತಿ ರುವ ಆತ್ಮವದು. ಆದರೆ ನಿಜವೆಂದು ತಿಳಿದು ಕೊಂಡ ತಮ್ಮ ಧ್ಯೇಯವನ್ನು ಮುಟ್ಟುವದು ಅವರಿಗೆ ಶಕ್ಯವಾಗಿರುವದಿಲ್ಲ. ಆದುದರಿಂದ ತಮ್ಮೆದುರಿಗಿರುವ ತಾತ್ಕಾಲಿಕ ಕೆಲಸದ ಬಗ್ಗೆ ದಕ್ಷತೆ ವಹಿಸಿದರೆ ಸಾಕೆಂದು ಅವರ ಭಾವನೆ; ಆ ಕೆಲಸ ಎಷ್ಟೇ ದೊಡ್ಡದಿರಲಿ, ಇಲ್ಲವೆ ಸಣ್ಣದಿ ರಲಿ, ಅದನ್ನು ಎಲ್ಲ ಬಗೆಯ ದಕ್ಷತೆಯಿಂದ ಮತ್ತು ಯಾವದೇ ಬಗೆಯ ಪೂರ್ವಗ್ರಹ ದೂಷಿತರಾಗದೆಅಥವಾಮಾನಸಿಕ ಪರಿತಾಪಕ್ಕೊಳ ಗಾಗದೆ ಅವರು ಮಾಡುತಿರುವರು.

ಕಲಕತ್ತೆ ಎನ್. ಕೆ. ಬೋಸ
೪–೯–೪೭

(೯ನೇ ಪುಟದಿಂದ)

ತಿಪೆರಾ ಜಿಲ್ಹೆಯ ಹೈಮಚಾರದಲ್ಲಿಯ ಥಕ್ಕರ ಬಾಪ್ಪಾ ಶಿಬಿರದಲ್ಲಿ ಕೆಲಸ ಮಾಡುತಿದ್ದರು. ಅವರು ಒಳ್ಳೆ ಕಲಾಪೂರ್ಣರಾಗಿದ್ದರು. ಸ್ವಭಾ ವತಃ ಮನಮೋಹಕರು. ತಮ್ಮ ಆ ಸ್ವಭಾವದ ಮೂಲಕ ಎಲ್ಲರ ಪ್ರೀತಿಯನ್ನೂ ಸಂಪಾದಿಸಿ ದ್ದರು. ತಮ್ಮ ಮಿತ್ರರಿಗಾಗಿ ಅವರು ಎಂಥ ಕೆಲ ಸವನ್ನೂ ಮಾಡಲು ತತ್ಪರರಾಗಿದ್ದರು. ಆದರಲ್ಲಿ ಅವರಿಗೊಳ್ಳೆ ಪ್ರೇಮ.

ಸುಚೀನ ಮಿತ್ರರ ಸ್ವಾರ್ಥತ್ಯಾಗದಿಂದ ದಿವಂ ಗತ ಗಣೇಶಶಂಕರ ವಿದ್ಯಾರ್ಥಿಯ ಸ್ವಾರ್ಥ ತ್ಯಾಗದ ಸ್ಮರಣೆಯಾಗದಿರದು. ಹಿಂದುಸ್ತಾನದ ಸ್ವಾತಂತ್ರ್ಯ ಬಾಳಬೇಕಾಗಿದ್ದರೆ ಇಂಥ ಇನ್ನೂ ಅನೇಕ ಜನರು ಪ್ರಾಣಾರ್ಪಣ ಮಾಡಬೇಕಾಗು ತ್ತದೆ.

ಸುಚೀನಮಿತ್ರರ ವಿಧವೆಗೆ ಗಾಂಧೀಜಿಯವರು ಹಿಂದುಸ್ತಾನಿಯಲ್ಲಿ ಕಳಿಸಿದ ಸಂದೇಶದಲ್ಲಿ ಹೇಳಿ ದಂತೆ ಸುಚೀನ ಮಿತ್ರರು ಅಮರರಾಗಿರುವರು. "ಇಂಥ ಮರಣವು ದುಃಖದ ಪ್ರಸಂಗವಲ್ಲ ಆದರೆ ಸಂತೋಷದ ಸಮಯವು. ಅವರನ್ನೇ ಅನುಸರಿಸಿ, ಅವರ ಬಗ್ಗೆ ಇದ್ದ ನಿಮ್ಮ ಪ್ರೇಮ ವನ್ನು ವ್ಯಕ್ತಪಡಿಸಿರಿ" ಎಂಬುದು ಗಾಂಧೀಜಿಯ ಸಂದೇಶವಾಗಿದ್ದಿತು.

ಅಜ್ಞಾನಾಂಧರಾಗಿ ತಮ್ಮ ಸ್ವಂತ ಗೆಳೆಯ ಮತ್ತು ಸಹಾಯಕನ ಕೊಲೆ ಮಾಡಿದವರ ಕಣ್ಣು ಇಂಥ ಉದಾಹರಣೆಗಳಿಂದ ತೆರೆಯಲಿ. ವಿಚಾರ ಹೀನರಾಗಿ ರೊಚ್ಚಿಗೇಳುವದರಿಂದ ಯಾರಿಗೂ ಸ್ವಲ್ಪೂ ಒಳಿತಾಗುವದಿಲ್ಲ. ಸದ್ಯದ ಸಂದರ್ಭದಲ್ಲಿ ಯಂತೆ ಅನೇಕ ಸಲ ಅಪರಿಮಿತ ಹಾನಿಯಲ್ಲಿ ಪರಿಣಮಿಸುತ್ತಿದೆ ಎಂಬುದನ್ನು ಇದು ತೋರಿಸಿ ಕೊಡುತ್ತದೆ.

ಕಲಕತ್ತೆ ಪ್ಯಾರೇಲಾಲ
೩–೯–೪೭

# ಕರ್ನಾಟಕ

## ಧಾರವಾಡ

ಹುಬ್ಬಳ್ಳಿಯಲ್ಲಿ ಶ್ರೀ ಹೊಸಹಳ್ಳಿ ವಕೀಲರ ಅಧ್ಯಕ್ಷತೆಯಲ್ಲಿ ಸೋವಿಯಟ ಮಿತ್ರರ ಸಂಘದ ಧಾರವಾಡ ಜಿಲ್ಲಾ ಶಾಖೆ ಸ್ಥಾಪಿಸಲ್ಪಟ್ಟು ಶ್ರೀಗಳಾದ ಎಂ. ಹಂಡಾಸರಾವ ಹಾಗು ಕೆ. ಸದಾಶಿವರಾವ ಅವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟಿರುವರು.

ಕರ್ನಾಟಕದ ಹುಲಿಯೆಂದು ಹೆಸರಾದ ಶ್ರೀ ಮುದವೀಡು ಕೃಷ್ಣರಾಯರು ದಿವಂಗತರಾದುದರಿಂದ ಧಾರವಾಡದಲ್ಲಿ ಕರ್ನಾಟಕ ಹಾಯಸ್ಕೂಲ, ಬಾಸೆಲಮಿಶನ್ ಹಾಯಸ್ಕೂಲಗಳಲ್ಲಿ ಸಭೆ ಜರುಗಿ ದುಃಖ ಪ್ರದರ್ಶಿಸಲ್ಪಟ್ಟು ಶಾಲೆಗಳನ್ನು ಮುಚ್ಚಲಾಯಿತು. ಕರ್ನಾಟಕ ವಿದ್ಯಾವರ್ಧಕ ಸಂಘದ ಅಟ್ಟದ ಮೇಲೆ ತಾ. ಕಾಂ. ಕಮೀಟಿ, ವಿ. ವ. ಸಂಘ, ಕ. ಏ ಸಂಘಗಳ ಪರವಾಗಿ ಸಭೆ ಸೇರಿ ದುಃಖ ವ್ಯಕ್ತ ಮಾಡಲಾಯಿತು. ಹುಬ್ಬಳ್ಳಿಯಲ್ಲಿ ಸತ್ಯಬೋಧ ವಾಚನಾಲಯದವರು, ಬೆಳ್ಳಿ ಬಳಗದವರು, ಸರಾಫ ಸಂಘದವರು, ಜಯ ಹಿಂದ ವಾಚನಾಲಯದವರು, ಜ ಗಂ ಎ. ವ್ಹಿ. ಸ್ಕೂಲಿನವರು ಸೊಗ್ಗ ಬಳಗದವರು ಸಭೆ ಸೇರಿ ದುಃಖ ಪ್ರದರ್ಶಿಸಿದರು.

ಹೈದರಾಬಾದದಲ್ಲಿ ನಡೆದ ಹೋರಾಟಕ್ಕೆ ಸಹಾಯ ನೀಡಲು ಧಾರವಾಡದಲ್ಲಿ ತಾಲೂಕ ಕಾಂ. ಕಮೀಟಿ ಪರವಾಗಿ ಶ್ರೀ ಮುಟ್ಟಿ ವಕೀಲರ ಅಧ್ಯಕ್ಷತೆಯಲ್ಲಿ ಉಪಸಮಿತಿ ರಚಿಸಲಾಗಿದ್ದು ಧನ ಸಹಾಯ ಮಾಡಲಪೇಕ್ಷಿಸುವವರು ಕಾರ್ಯದರ್ಶಿಗಳಾದ ರಘುನಾಥರಾವ ಜಹಾರ ಅವರ ಕಡೆಗೆ ಹಣ ಸಲ್ಲಿಸಬೇಕು. ಸತ್ಯಾಗ್ರಹಕ್ಕೆ ಹೋಗಲಿಚ್ಛಿಸುವವರೂ ಅವರ ಕಡೆಗೆ ಹೆಸರು ಕೊಡಬೇಕು.

ಹುಬ್ಬಳ್ಳಿಯ ಶ್ರೀ ಎಸ್. ರಾಮಚಂದ್ರಾಚಾರ್ಯರು ಹಿಂದುಸ್ತಾನದ ಮುಖ್ಯ ಪ್ರಧಾನರಾದ ಪಂ. ಜವಾಹರಲಾಲರಿಗೆ ತಂತಿ ಕಳಿಸಿ, ಮೈಸೂರ ಸರಕಾರವೇ ಅತ್ಯಾಚಾರದಿಂದ ಜನರನ್ನು ಕೆರಳಿಸುತ್ತಿದ್ದು ಅನವಶ್ಯಕ ಲಾಠಿ ಪ್ರಹಾರ ಗೋಳಿಬಾರಗಳಿಂದ ಪರಿಸ್ಥಿತಿ ಹದಗೆಡುತ್ತಿರುವದೆಂದೂ ದಯಮಾಡಿ ಕೈಹಾಕಬೇಕೆಂದೂ ವಿನಂತಿಸಿದ್ದಾರೆ.

ಧಾರವಾಡ ನಾಗರಿಕರು ತಾ. ೭ ನೇ ದಿನ ನಗರ ಸಭೆ ಅಟ್ಟದ ಮೇಲೆ ಸಭೆ ಸೇರಿ ಮೈಸೂರ ಹೈದರಾಬಾದಗಳಲ್ಲಿ ನಡೆದ ಹೋರಾಟಕ್ಕೆ ಬೆಂಬಲ ವ್ಯಕ್ತ ಮಾಡುವದು, ಸರಕಾರದ ದಬ್ಬಾಳಿಕೆ ಖಂಡಿಸುವದು, ಹುತಾತ್ಮರ ಆತ್ಮಕ್ಕೆ ಶಾಂತಿ ಕೋರುವದು ಮೊದಲಾದ ಗೊತ್ತುವಳಿ ಸ್ವೀಕರಿಸಿದರು.

ಗದಗ ತಾಲೂಕ ಮುಲಸಮುದ್ರದಲ್ಲಿ ಮೈಲಾರಪ್ಪನ ಕೊಲೆ ಮಾಡಿದ ಬಗ್ಗೆ ಶಿವಪ್ಪ ಎಂಬವರಿಗೆ ಕರೆನೀರಿನ ಶಿಕ್ಷೆ ಬಸಪ್ಪ ಎಂಬವರಿಗೆ ಗಲ್ಲಿನ ಶಿಕ್ಷೆ ವಿಧಿಸಲ್ಪಟ್ಟಿರುವದು.

ಮೈಸೂರ ಸತ್ಯಾಗ್ರಹದಲ್ಲಿ ಭಾಗ ವಹಿಸಲು ಧಾರವಾಡ ತಾಲೂಕ ಸಮಾಜವಾದಿ ಪಕ್ಷದ ನೇತೃತ್ವದಲ್ಲಿ ಗರಗ, ನೇರಲಕಟ್ಟಿ, ಕೋಟೂರ, ಶಿವಳ್ಳಿ ಮೊದಲಾದ ಹಳ್ಳಿಗಳ ೩೧ ರೈತರು ಶ್ರೀ ವೀರಪ್ಪ ಸವದತ್ತಿಯವರ ನೇತೃತ್ವದಲ್ಲಿ ಮೈಸೂರಿಗೆ ಹೋಗಿರುವರು.

ಕ. ಪ್ರಾಂ. ಕಾಂ. ಕ ಅಧ್ಯಕ್ಷರೂ ಮೈಸೂರ ಕಾಂಗ್ರೆಸ್ಸಿನ ಮೂರನೇ ಸರ್ವಾಧಿಕಾರಿಗಳೂ ಆದ ಶ್ರೀ ಎಸ್. ನಿಜಲಿಂಗಪ್ಪನವರು ರಾಣೆಬೆನ್ನೂರಲ್ಲಿ ಮೈಸೂರ ಸತ್ಯಾಗ್ರಹ ಶಿಬಿರ ತೆರೆಯಲು ಶ್ರೀ ದುಮ್ಮಿ ಮುರಿಗೆಪ್ಪನವರಿಗೆ ಅಧಿಕಾರ ಕೊಟ್ಟಿದ್ದು ಉತ್ತರ ಕರ್ನಾಟಕದಿಂದ [illegible]ಗ್ರಹಕ್ಕೆ ಹೋಗುವವರು ಈ ಶಿಬಿರಕ್ಕೆ [illegible] ಮುಂದಿನ ವ್ಯವಸ್ಥೆ ಮಾಡಿಕೊಳ್ಳಬೇಕು.

ಧಾರವಾಡ ರೋಟರಿ ಕ್ಲಬ್ಬಿನಲ್ಲಿ ತಾ. ೭ ನೇ ದಿನ ಶ್ರೀಮತಿ ಉಮಾಬಾಯಿ ಕುಂದಾಪುರರು ಕಸ್ತೂರಬಾ ನಿಧಿಯ ಉದ್ದೇಶ ಮತ್ತು ಕಾರ್ಯಸರಣಿ ಹಿಂದಿಯಲ್ಲಿ ಭಾಷಣ ಮಾಡಿದರು.

ಗದಗ ಬೆಟಗೇರಿ ನಾಗರಿಕರು ತಾ. ೮ ನೇ ದಿನ ಶ್ರೀ ಹಾಲಿಹಾಳ ಅನಂತರಾಯರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಶ್ರೀ ಮುದವೀಡು ಕೃಷ್ಣರಾಯರ ನಿಧನದ ಬಗ್ಗೆ ದುಃಖ ಪ್ರದರ್ಶಿಸಿದರು. ಶ್ರೀಗಳಾದ ಕೊಳ್ಳಿ, ಬರದ್ವಾಡ, ಮುಳಗಿ [illegible] ಲಾದವರು ಭಾಷಣ ಮಾಡಿ ಅವರ ನಿಧನ[illegible] ಕರ್ನಾಟಕಕ್ಕಾದ ಹಾನಿಯನ್ನು ವಿವರಿ[illegible].

ರಾಣೆಬೆನ್ನೂರಿನ ಅರುಣಾದ ಹಿಂದ ಸ್ವ[illegible] ಸೇವಕರೂ ಹೂಲಿಹಳ್ಳಿಯ ರಾಷ್ಟ್ರ ಸೇನಾ[illegible] ಸ್ವಯಂಸೇವಕರೂ ಮೈಸೂರ ಸತ್ಯಾಗ್ರಹದಲ್ಲಿ ಭಾಗ ವಹಿಸಲು ಹೋಗಿದ್ದಾರೆ.

ಕರ್ನಾಟಕ ಕಾಲೇಜಿನಲ್ಲಿ ಇಂಗ್ಲಿಷ ಪ್ರಾಧ್ಯಾಪಕರಾದ ಮೆನೆಝಿಸ ಅವರನ್ನು ಹಿಂದುಸ್ತಾನ ಸರಕಾರದವರು ಬ್ರಾಝಿಲದಲ್ಲಿ ತಮ್ಮ ರಾಯಭಾರಿಗಳೆಂದು ನೇಮಿಸಲು ಆರಿಸಿದ್ದಾರೆಂದು ತಿಳಿಯುತ್ತದೆ.

## ವಿಜಾಪುರ

ಬಾಗಲಕೋಟೆಯಲ್ಲಿ ಕೂಡಿದ ಕ. ಏ. ಸಂಘ ಹಾಗು ಕ. ಪ್ರಾಂ. ಕಾಂ. ಕಮೀಟಿಯ ಕಾರ್ಯಕಾರೀ ಮಂಡಳದ ಸಭೆಯಲ್ಲಿ ಕರ್ನಾಟಕ ಏಕೀಕರಣ ಕ್ರಿಯಾಸಮಿತಿಗೆ ಇನ್ನು ಕರ್ನಾಟಕ ಏಕೀಕರಣ ಮಹಾಸಮಿತಿ ಎಂದು ಕರೆಯಬೇಕೆಂದು ಗೊತ್ತಾಗಿ, ಅದರ ಕಾರ್ಯಕಾರಿ ಮಂಡಳದ ಚುನಾವಣೆ ಆಗಿ ಶ್ರೀ ಎಸ್ ನಿಜಲಿಂಗಪ್ಪನವರು ಅಧ್ಯಕ್ಷರಾಗಿಯೂ ಶ್ರೀಗಳಾದ ಜಿನರಾಜ ಹೆಗಡೆ, ನೇಸ್ವಿ, ಮುನವಳ್ಳಿ ಅವರು ಉಪಾಧ್ಯಕ್ಷರಾಗಿಯೂ, ಅಂದಾನೆಪ್ಪ ದೊಡ್ಡಮೇಟಿ ಹಾಗು ಮಂಗಳವೇಡೆ ಶ್ರೀನಿವಾಸರಾಯರು ಕಾರ್ಯದರ್ಶಿಗಳಾಗಿಯೂ ಯಳಮಲಿ ಕಾಂತಪ್ಪನವರು ಕೋಶಾಧ್ಯಕ್ಷರಾಗಿಯೂ ಆರಿಸಲ್ಪಟ್ಟರು. ಕಾರ್ಯಕಾರಿಮಂಡಳದಲ್ಲಿ ಕರ್ನಾಟಕದ ಎಲ್ಲ ಭಾಗಗಳ ೩೧ ಪ್ರತಿನಿಧಿಗಳಿರುವರು. ಸಭೆಯಲ್ಲಿ ಮೈಸೂರ ಹೈದರಾಬಾದ ಹೋರಾಟಗಳಿಗೆ ಬೆಂಬಲಕೊಡುವದು, ಸಾಂಗಲಿ, ರಾಮದುರ್ಗ, ಮೊದಲಾದ ಸಂಸ್ಥಾನಗಳ ರಾಜರು ಪ್ರಜೆಗಳ ಒಪ್ಪಿಗೆಯಿಲ್ಲದೆ ಒಕ್ಕೂಟ ಮಾಡಿಕೊಳ್ಳುವ ಪ್ರಯತ್ನ ನಡೆಸಿದ್ದನ್ನು ಖಂಡಿಸುವದು ಮೊದಲಾದ ನಿರ್ಣಯಗಳಾದವು.

ಅಖಿಲ ಕರ್ನಾಟಕ ಕುರುಬರ ಜನೇ ಮಹಾಸಭೆಯು ಇದೇ ನವೆಂಬರ ಕೊನೆಗೆ ವಿಜಾಪುರದಲ್ಲಿ ಜರಗುವದು. ಶ್ರೀ ಎನ್ ಬಿ ದಳವಾಯಿ ಎಂ ಎಲ್ ಎ ಅವರು ಅಧ್ಯಕ್ಷತೆ ವಹಿಸುವರು.

ಸಿಂದಗಿ ತಾಲೂಕ ಕನ್ನೊಳ್ಳಿ ಮಾಲೀಕಾರನು ಜೋಳವನ್ನು ಸಾಗಿಸುತ್ತಿದ್ದಾಗ ಸಿಂದಗಿ ಹತ್ತರ ಮಾಮಲೇದಾರ ಹಾಗು ಫೌಜದಾರರ ಕೈಯಲ್ಲಿಯೆ ಸಿಕ್ಕಿರುವನು.

## ಉತ್ತರಕನ್ನಡ

ಜಿಲ್ಹೆಯಲ್ಲಿ ಸೀದಾದಲ್ಲಿ ೧೫ದಿನಗಳಿಗೆ ಕೊಡಲಾಗುತ್ತಿದ್ದ ಅಕ್ಕಿ ಪ್ರಮಾಣದಲ್ಲಿ ಮತ್ತೆ ಸೀದಾ ಭಾಗಗಳಲ್ಲಿ ಅರ್ಧಸೇರು ಸೀದೇತರ ಭಾಗಗಳಲ್ಲಿ ೧ಸೇರು ಕಡಿಮೆ ಮಾಡಲಾಗಿದೆ.

ಕಾರವಾರದಲ್ಲಿ ದಿನಾಂಕ ೪ ರಂದು ರಾ. ಬ ಜಿ. ಎಸ್ ಕೆಲಂಗರ ಹಸ್ತದಿಂದ ಪ್ರೌಢ ವರ್ಗದ ಶಾಲೆಯ ಉದ್ಘಾಟನ ಜರುಗಿತು. [illegible] ಶಿಕ್ಷಣಶಾಲೆಯ ಶಿಕ್ಷಕರೊಬ್ಬರು ಈ ಶಾಲೆಯನ್ನು ನಡೆಸುವರು.

ಕಾರವಾರ ನಗರ ಸಭೆಯ ತ್ರೈವಾರ್ಷಿಕ [illegible] ನಾವಣೆಯಲ್ಲಿ ಹಿಂದಿನ ಉಪಾಧ್ಯಕ್ಷರಿಯರು [illegible] ಕಟಿಟಿ [illegible] ಜಪ್ತಾದವು.

[illegible]

[illegible]

---

[illegible]

## ಬಳ್ಳಾರಿ

ಮದ್ರಾಸ ಸರಕಾರದ ಔದ್ಯೋಗಿಕ ಮಂತ್ರಿಗಳಾದ ಮಾನ್ಯ ಸೀತಾರಾಮ ರೆಡ್ಡಿಯವರು ಶ್ರೀಗಳಾದ ಆರ್ ಸೋರ್ರ ನಾರಾಯಣರಾವ, ಬಿ. ಭೀಮರಾವ, ಟಿ ಸುಬ್ರಹ್ಮಣ್ಯಂ ಮೊದಲಾದವರೊಂದಿಗೆ ತಾ ೮ ನೇ ದಿನ ಕಂಪಲಿ ರಾಮಸಾಗರ, ಕಾಮಲಾಪುರ, ಮಲಪನಗುಡಿ, ಹೊಸಪೇಟೆಗಳಿಗೆ ಭೆಟ್ಟಿಕೊಟ್ಟು ಸಂಕಷ್ಟಗಳನ್ನು ಕೇಳಿಕೊಂಡು ಜೋಳ ಮೊದಲಾದ ಕಾಳು ಒದಗಿಸುವ ಬಗ್ಗೆ ವ್ಯವಸ್ಥೆ ಮಾಡಲಾಗುವದೆಂದು ಆಶ್ವಾಸನವಿತ್ತರು. ಅನಂತರ ಅವರು ತುಂಗಭದ್ರಾ ಅಣೆಕಟ್ಟಿನ ಸ್ಥಳ ಪರಿಶೀಲಿಸಿ ಹೊಸಪೇಟೆಗೆ ತಿರುಗಿ ಬಂದು ಒಡಕರಾಯನ ಗುಡಿಯಲ್ಲಿ ಹರಿಜನ ತಂಡದೊಡನೆ ಪ್ರವೇಶಿಸಿ ದೇವತಾರಾಧನೆಗೈದು ಬಳ್ಳಾರಿಗೆ ಪ್ರಯಾಣ ಮಾಡಿದರು.

ಹೊಸಪೇಟೆ ಮ್ಯುನಸಿಪಲ್ ಚುನಾವಣೆಯಲ್ಲಿ ಶ್ರೀಗಳಾದ ೧ ಬಣಗಾರ ನಬೀ ಸಾಹೇಬ ೨ ಗುತ್ತಿ ತೋಟಪ್ಪ ೩ ಗೌಡ್ರ ಭರಮಲಿಂಗಪ್ಪ ೪ ಪಿ ನಾಗಲಿಂಗಪ್ಪ ೫ ದಂಡಿತಿಮ್ಮಪ್ಪ ೬ ರಾಜಾಸಾಹೇಬ ೭ ಜಂಬನಹಳ್ಳಿ ಸಿದ್ದಪ್ಪ ೮ ದುರಕಪ್ಪ ೯ ರಹಿಮಾನ ಸಾಹೇಬ ೧೦ ಕನಕಪ್ಪ ೧೧ ಪಂತರ ರಾಮಚಂದ್ರರಾವ ೧೨ ಯೂಸೂಫ ೧೩ ಶ್ರೀಮತಿ ಮುದ್ಲಾಪುರ ತ್ರಿವೇಣಿ ಬಾಯಿ ಅವರು ಅವಿರೋಧ ಆರಿಸಿ ಬಂದಿರುವರು.

ಮಾನ್ಯ ಸೀತಾರಾಮರೆಡ್ಡಿಯವರು ತಾ ೭ ನೇ ದಿನ ಬಳ್ಳಾರಿಗೆ ಆಗಮಿಸಿ ಸಾಂಬಮೂರ್ತಿ ಬೈಲಿನಲ್ಲಿ ಏರ್ಪಡಿಸಿದ ಬಹಿರಂಗ ಸಭೆಯಲ್ಲಿ ಭಾಷಣ ಮಾಡುತ್ತ ಸದ್ಯದ ಆಹಾರ ಪರಿಸ್ಥಿತಿಯಿಂದ ಪಾರಾಗಲು ರೈತರೆಲ್ಲ ಸಹಾಯಮಾಡಬೇಕೆಂದೂ ಹಳ್ಳಿಗರ ಕುಂದು ಕೊರತೆಗಳನ್ನು ನೀಗಿಸಲು ಸರಕಾರವು ಶಕ್ಯವಿದ್ದ ಯತ್ನ ಮಾಡುವದೆಂದೂ ಹೇಳಿದರು. ಮರುದಿವಸ ಕಲೆಕ್ಟರ ಕಚೇರಿಯಲ್ಲಿ ಕೂಡಿದ ಸಭೆಯಲ್ಲಿ ಶ್ರೀಗಳಾದ ನಾಗಭೂಷಣಂ, ವೆಂಕೋಬರಾವ, ಭೀಮರಾವ ಮೊದಲಾದವರು ರೈತರ ಕಷ್ಟಗಳನ್ನು ತೋಡಿಕೊಂಡರು. ಮಂತ್ರಿಗಳು ಅವುಗಳ ಪರಿಹಾರದ ಆಶ್ವಾಸನವಿತ್ತ ಅಧಿಕಾರಿಗಳ ಲೋಪದೋಷಗಳನ್ನು ಕಲೆಕ್ಟರರ ಗಮನಕ್ಕೆ ತರಬೇಕೆಂದು ತಿಳಿಸಿದರು.

## ಸಂಸ್ಥಾನಗಳು

ಕರ್ನಾಟಕ ಪ್ರಾಂತಿಕ ಕಮ್ಯುನಿಸ್ಟ ಪಕ್ಷದ ಕಾರ್ಯಸಮಿತಿಗಳು ಮೈಸೂರ ಹೈದರಾಬಾದಗಳಲ್ಲಿ ನಡೆದ ದಬ್ಬಾಳಿಕೆ ಖಂಡಿಸಿ ಹಿಂದುಸ್ತಾನ ಸರಕಾರವು ಕೈಹಾಕಬೇಕೆಂದು [illegible] ಸೂಚಿಸಿರುವರು.

ಕೊಲ್ಹಾಪುರದಲ್ಲಿ ಗಾಂಧೀಜಿಯ ಪುತ್ಥಳಿ ಸ್ಥಾಪಿಸುವದಕ್ಕಾಗಿ ಶ್ರೀ ಬಾಗಲರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯು ರಚಿತವಾಗಿದೆ.

## ಬೆಳಗಾವಿ

ಶ್ರೀಯುತರಾದ ಬಳವಂತರಾವ ಹೋತದಾರ ಹಾಗು ಶ್ರೀರಂಗ ಕಾಮತ ಅವರು ಮುಂಬಯಿಯಲ್ಲಿ ಪೂರೈಕೆ ಮಂತ್ರಿಗಳಾದ ದಿನಕರರಾವ ದೇಸಾಯಿಯವರನ್ನು ಕಂಡು ಬೆಳಗಾವ ಜಿಲ್ಹೆಯಲ್ಲಿ ಆಹಾರ ಸಂಗ್ರಹ ಸಾಕಷ್ಟಿಲ್ಲೆಂದು ತಿಳಿಸಲಾಗಿ ಮಂತ್ರಿಗಳು ಈ ತಿಂಗಳೊಳಗಾಗಿ ಗೋದಿ, ಕಣ್ಣಿ, ಜವೆಗೋದಿ ಹಾಗು ಗೋದಿ ಹಿಟ್ಟು ಈ ಎಲ್ಲ ಕೂಡಿ ೨೫೦೦ ಟನ್ ಕಳಿಸುವದಾಗಿ ಆಶ್ವಾಸನವಿತ್ತರು.

ಸವದತ್ತಿಯ ನಾಗರಿಕರು ಪ್ರಸಿದ್ಧ ನೇತ್ರ ಚಿಕಿತ್ಸಕರಾದ ಡಾ ಮೋದಿಯವರ ಪರಿಶ್ರಮವನ್ನು ಮೆಚ್ಚಿ ಅವರಿಗೆ ಮಾನಪತ್ರ ಸಮರ್ಪಿಸಿದರು. ಡಾಕ್ಟರರು ೩೦೦ ಜನರ ಕಣ್ಣು ಪರೀಕ್ಷಿಸಿ ೪೦ ಜನರಿಗೆ ಶಸ್ತ್ರ ಚಿಕಿತ್ಸೆ ಮಾಡಿದರು.

ಬೆಳಗಾವ ಪ್ರಾದೇಶಿಕ ಸಮಿತಿಯವರು ಪಂ. ನೆಹರೂ ಹಾಗು ಘಟನಾಸಮಿತಿ ಅಧ್ಯಕ್ಷರಿಗೆ ತಂತಿಕಳಿಸಿ ಕರ್ನಾಟಕ ಏಕೀಕರಣ ಕೂಡಲೆ ಕೈಕೊಳ್ಳಬೇಕೆಂದೂ ಹಾಗೆಯೆ ಬಿಟ್ಟಲ್ಲಿ ಪ್ರಚಂಡ ಆಂದೋಲನವೇಳದೆ ಹೋಗದೆಂದೂ ತಿಳಿಸಿದ್ದಾರೆ.

ಹಲಸಿ ಹತ್ತರ ಕೆಲವು ವರ್ತಕರು ೧೪೦ ಚೀಲ ಜೋಳವನ್ನು ಕಳ್ಳಪೇಟೆಗೆ ಸಾಗಿಸುತ್ತಿದ್ದಾಗ ಕಂಟ್ರೋಲ ಅಧಿಕಾರಿಗಳಾದ ಶ್ರೀ ಗುಡಿಯವರು ಅವನ್ನು ಹಿಡಿದು ಪಂಚನಾಮೆ ಮಾಡಿರುವರು.

ಸುಳಗಟ್ಟಿ ಅಡವಿಗೆ ವನ ವಿಹಾರಕ್ಕೆ ಹೋಗಿ ಸುಗ್ರಾಸ ಭೋಜನ ಮೊದಲಾದ ಕಾರ್ಯಕ್ರಮ ಜರುಗಿಸಿದ ಬೆಳಗಾವಿ ನಗರ ಸಭೆಯ ಕೆಲವು ಸದಸ್ಯರ ಮೇಲೆ ಕಂಟ್ರೋಲ ಅಧಿಕಾರಿಗಳ ಲಕ್ಷ ಹೊರಳಿದ್ದುದು ತಿಳಿಯುತ್ತದೆ.

### ಚಂದಾದಾರರಲ್ಲಿ ವಿನಂತಿ

ಯಾವದೇ ಪತ್ರವ್ಯವಹಾರ ಮಾಡುವಾಗ್ಗೆ ನಿಮ್ಮ ಚಂದಾ ನಂಬರನ್ನು ಅಂದರೆ ನಾವು ನಿಮ್ಮ ವಿಳಾಸದ ಪ್ರಾರಂಭಕ್ಕೆ ಸೇರಿಸಿದ ನಂಬರನ್ನು ಬರೆದರೆ ಮಾತ್ರ ನಿಮ್ಮ ಪತ್ರಕ್ಕೆ ಲಕ್ಷಗೊಡಲಾಗುವದು. ಅವಧಿ ಮುಗಿಯುವ ಮುಂಚೆಯೇ ೧೫ ದಿನ ಪೂರ್ವದಲ್ಲಿ ವ್ಹಿ. ಪಿ. ಮಾಡಲಾಗುವದು. ವ್ಹಿ. ಪಿ. ಬೇಡಾದವರು ೧೫ ದಿನ ಮೊದಲೇ ನಮಗೆ ತಿಳಿಸಬೇಕು. ವ್ಹಿ. ಪಿ. ತಿರಸ್ಕರಿಸಿ ಹಿಂದುಗಡೆ M. O. ಮಾಡಿದರೆ ವ್ಹಿ. ಪಿ. ಖರ್ಚು ಮುರಿಯಲಾಗುವದು.

**ಕರ್ಮವೀರ ಚಂದಾ ವಿವರ**

ಅಂಚೆ ವೆಚ್ಚ ಸಹಿತ ಚಂದಾ ಹಣ ಮುಂಗಡ

| | |
|---|---|
| ೧ ವರ್ಷಕ್ಕೆ | [illegible] |
| ೬ ತಿಂಗಳಿಗೆ | [illegible] |
| ೩ ,, | [illegible] |

ವ್ಹಿ. ಪಿ. [illegible]

[illegible]

# ಹೈದ್ರಾಬಾದ ಸತ್ಯಾಗ್ರಹ
## ಸಂಸ್ಥಾನದಲ್ಲಿ ಬಂಧನಸತ್ರ

ಕಲಬುರ್ಗಿಯಲ್ಲಿ ತಾ ೨ ರಲ್ಲಿ ಜನರು ಪತ್ರಿಣ ಹೈದ್ರಾಬಾದ ಸಂಸ್ಥಾನ ಕಾಂಗ್ರೆಸ ಸ್ಥಾಯಿ ಸಮಿತಿಯ ಅಜ್ಞೆಯಮೇರೆಗೆ ಮನೆಗಳ ಮೇಲೂ ಅಂಗಡಿಗಳ ಮೇಲೂ ಕೆಲವು ಸಾರ್ವಜನಿಕ ಗುಡಿಗಳ ಹಾಗೂ ಸ್ಥಳಗಳ ಮೇಲೂ ಧ್ವಜಗಳನ್ನೇರಿಸಿದರು. ಪೇಟೆಯಲ್ಲಿರುವ ಅಂಗಡಿಗಳ ಹಾಗೂ ಇನ್ನಿತರ ಸ್ಥಳಗಳ ಮೇಲಿರುವ ಧ್ವಜಗಳನ್ನು ಪೋಲೀಸ ಹಾಗು ಪೋಲೀಸ ಅಧಿಕಾರಿಗಳು ಬೆದರಿಸಿ ಕಿತ್ತುಕೊಂಡು ಹೋದರು.

ಅದೇ ದಿನ ಸಂಜೆ ಐದು ಗಂಟೆಗೆ ಶ್ರೀ ನಾರಾಯಣರಾವ ಜಹಾಗೀರದಾರ ಅವರು ಸಾರ್ವಜನಿಕವಾಗಿ ನಗರ ತೋಟದ ಭವ್ಯ ಮೈದಾನದಲ್ಲಿ ಧ್ವಜವನ್ನೇರಿಸಿ ಭಾಷಣ ಮಾಡಿದರು. ೧೪೪ ಕಲಮು ಅಮಲಿನಲ್ಲಿ ಇದ್ದರೂ ೩ನೂರಕ್ಕೆ ಮೇಲ್ಪಟ್ಟ ವಿದ್ಯಾರ್ಥಿಗಳೂ ನಾಗರಿಕರೂ ನೆರೆದಿದ್ದರು. ಜಯಘೋಷ ನಡೆದಾಗ ಪೋಲೀಸ ಪಡೆ ಬಂದು ಎಲ್ಲರನ್ನೂ ಚದುರಿಸಿ ಸತ್ಯಾಗ್ರಹಿಗಳನ್ನು ಬಂಧಿಸಿದರು. ೩೦ ವಿದ್ಯಾರ್ಥಿಗಳನ್ನೂ ಕೂಡ ಬಂಧಿಸಿದ್ದಾರೆ. ಧ್ವಜದಿನ ನಿಮಿತ್ತ ಉಸ್ಮಾನಿಯಾ ಕಾಲೇಜ ಸ್ಥಳಿಕ ಹಾಯಸ್ಕೂಲ ಹಾಗೂ ಅಂಗಡಿಗಳು ಸಂಪೂರ್ಣ ಹರತಾಳ ಪಾಲಿಸಿದವು.

[illegible] ಇಂದು ಮುಂಜಾನೆ ೯ ಗಂಟೆಗೆ ಶ್ರೀ [illegible] ದೇಸಾಯಿಯವರು ಧ್ವಜವಂದನೆ ಹಾಗೂ ಕಾಯದೆ ಭಂಗ ಸತ್ಯಾಗ್ರಹ ಮಾಡಿದರು. ಆದರೆ ಅವರನ್ನು ಬಂಧಿಸಲಿಲ್ಲ.

[illegible]

[illegible]

ಬಾಜಾರ ಮತ್ತು ಅಂಗಡಿಗಳಮೇಲಿನಧ್ವಜವನ್ನು ಅಮೀನರು ಮುಸಲ್ಮಾನರ ಕೈಯಿಂದಲೇ ಕೀಳಿಸಿದರು. ಸಾಯಂಕಾಲ ಎಲ್ಲರನ್ನು ಬಿಟ್ಟು ಬಿಟ್ಟರು.

ಕಸಬಾಇಟಗೆಯಲ್ಲಿ ಯಮನೂರ ಸಾಹೇಬ ರಾಜಸಾಹೇಬ ಪಿಂಜಾರ ಮತ್ತು ಈರಪ್ಪ ಅಯ್ಯಪ್ಪ ಅಂಗಡಿ ಇವರು ಸತ್ಯಾಗ್ರಹವನ್ನಾಚರಿಸಿ ಬಂಧಿಸಲ್ಪಟ್ಟರು.

ಬೀದರದಲ್ಲಿ ಅಗಸ್ಟ ೩೧ ಕ್ಕೆ ಶ್ರೀ ಶ್ರೀನಿವಾಸರಾವ ಏಖೇಳಕರ, (ಜಿಲ್ಲಾ ಕಾಂ. ಸಮಿತಿಯ ಅಧ್ಯಕ್ಷರು) ಹಾಗೂ ಶ್ರೀ ಕೇಶರಾವ ಹವಾಲದಾರ, ಶ್ರೀ ಮಹಾಂತಪ್ಪಾ, ಶ್ರೀ ಚಂದ್ರಕಾಲ ಇವರು ಹೈದ್ರಾಬಾದ ಸಂರಕ್ಷಣಾ ಕಾಯದೆಯನ್ವಯ ಬಂಧಿಸಲ್ಪಟ್ಟರು.

ಉದಗೀರ ತಾಲೂಕದಲ್ಲಿ ಧ್ವಜವಂದನೆ ಮಾಡಿದ್ದಕ್ಕಾಗಿ ಶ್ರೀ ರಾಮರಾಜೇಶ್ವರ ವಕೀಲ, ಶ್ರೀ ಶಂಕರರಾವ ಕಾರ್ಲೇಕರ ಶ್ರೀ ದಿಗಂಬರರಾವ ವಕೀಲ ಹೆಡಮಾಸ್ತರ ಧೋಂಡೋಸಿಂಗ ಶ್ರೀ ಶ್ರೀನಿವಾಸರಾವ ಅಹಂಇವರು ಬಂಧಿಸಲ್ಪಟ್ಟರು.

ಯಾದಗಿರಿಯಲ್ಲಿ ಸೊಲ್ಲಾಪುರದ ಪ್ರಮುಖ ಕಾಂಗ್ರೆಸ ಕಾರ್ಯಕರ್ತರೂ ಶಾಸನ ಸಭೆಯ ಸದಸ್ಯರೂ ಆದ ಶ್ರೀ ಧನ್ನೂಸಿಂಗರವರು ಅಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಿದರು. ಡಾ. ಅಂಕ್ರೋಳೀಕರರೂ ನಾಲ್ಕು ಮಾತುಗಳನ್ನು ಹೇಳಿದರು. ಸಭೆಯು ಹೈದ್ರಾಬಾದವು ಹಿಂದುಸ್ಥಾನ ಒಕ್ಕೂಟವನ್ನು ಸೇರಬೇಕೆಂದು ನಿರ್ಣಯಿಸಿತು.




## ಮುಂಬಯಿ

ಅ. ಭಾ. ಟ್ರೇಡ ಯೂನಿಯನ್ ಕಾಂಗ್ರೆಸ್ಸಿನ ಎರಡು ದಿನದ ಅಧಿವೇಶನವು ೮ ನೇ ತಾರೀಕು ಮುಕ್ತಾಯವಾಯಿತು. ಉಪಾಧ್ಯಕ್ಷ ಶ್ರೀ ಖೇಡಗೀಕರರು ಅಧ್ಯಕ್ಷತೆ ವಹಿಸಿದ್ದರು. ಕಾಂಗ್ರೆಸ್ಸಿನವರು ಹಿಂದೀ ರಾಷ್ಟ್ರೀಯ ಮಜದೂರ ಸಂಘವನ್ನು ಸ್ಥಾಪಿಸಿದ್ದರಿಂದ ಟ್ರೇಡ ಯೂನಿಯನ್ ಅಂದೋಲನಕ್ಕೆ ಅಡ್ಡಿಯಾಗುವದೆಂಬ ಗೊತ್ತುವಳಿ ಸ್ವೀಕೃತವಾಯಿತು.

ಮುಂಬಯಿ ವಿಧಿಮಂಡಳದ ಉಪಾಧ್ಯಕ್ಷರಾಗಿರುವ ಶ್ರೀ ಭಾವೂಸಾಹೇಬ ಸೋಮಣ ಇವರು ಶ್ರೀ ಮಂಗೆಲದಾಸ ಪಕ್ವಾಸಾ ಇವರ ಸ್ಥಳದಲ್ಲಿ ವಿಧಿಮಂಡಳದ ಅಧ್ಯಕ್ಷರಾಗಿ ಆರಿಸಲ್ಪಡುವರೆಂದು ತಿಳಿಯುತ್ತದೆ.

ಪರರಾಷ್ಟ್ರಗಳ ನೋಕರಿಯ ದಾರಿಯನ್ನು ಕಾಯುತ್ತ ಎಪ್ಪೋ ಜರ್ಮನ್ ತಜ್ಞರು ಜರ್ಮನಿಯಲ್ಲಿ ಕುಳಿತಿದ್ದಾರೆ. ಹಿಂದುಸ್ಥಾನದ ಹೊಸ ಹೊಸ ಉದ್ಯೋಗಗಳಲ್ಲಿ ಇವರನ್ನು ಸಹಜವಾಗಿ ನೇಮಿಸಿಕೊಳ್ಳಬಹುದೆಂದು ಯುರೋಪಿನಲ್ಲಿ ಅಧ್ಯಯನ ಸಂಚಾರ ಮುಗಿಸಿಕೊಂಡು ಇದೇ ಮರಳಿ ಬಂದ ಮುಂಬಯಿಯ ಶ್ರೀ ಹೆರ್ಲೇಕರರು ಹೇಳುತ್ತಾರೆ.

ಸರ್ ಜಾನ್ ಕಾಲ್ವಿಲ್ಲರವರು ರಜೆ ಪಡೆದು ಸ್ವದೇಶಕ್ಕೆ ಹೋಗಲಿರುವರಷ್ಟೆ. ಈ ಅವಧಿಗಾಗಿ ಸರ್ ಎಚ್. ಪಿ. ಮೋದಿಯವರು ತಾತ್ಪೂರ್ತಿಕ ಗವರ್ನರರೆಂದು ನೇಮಿಸಲ್ಪಟ್ಟಿದ್ದಾರೆ. ಸರ್ ಎಚ್. ಪಿ. ಮೋದಿಯವರ ಪ್ರತಿಜ್ಞಾವಿಧಿ ೭ನೇ ತಾರೀಕು ಸಂಜೆ ಜರುಗಿತು.

ಕಲಕತ್ತಾ ಮೇಲಗಾಡಿಯು ೮ನೇ ತಾರೀಕು ವಿಕ್ಟೋರಿಯಾ ಟರ್ಮಿನಸ್ ನಿಲ್ದಾಣದಲ್ಲಿ ಬಂದು ನಿಂತಾಗ ಮೂರನೇ ವರ್ಗದ ಡಬ್ಬಿಯೊಂದರಲ್ಲಿ ನಾಲ್ಕು ದೇಸೀ ಬಾಂಬುಗಳಿದ್ದುದು ಕಂಡು ಬಂದಿತು, ಪೋಲೀಸರು ಶೋಧ ನಡೆಸಿದ್ದಾರೆ.

ಅಸ್ಟ್ರೇಲಿಯಾ ಮತ್ತು ಕಾನಡಾದಿಂದ ೩೭೦೦ ಟನ್ ಗೋದಿಯನ್ನು ಹೇರಿಕೊಂಡು ನಾಲ್ಕು ಹಡಗಗಳು ಮುಂಬಯಿಗೆ ಬಂದಿವೆ. ದಿಲ್ಲಿಯಲ್ಲಿ ನಿರಾಶ್ರಿತರ ಸಂಖ್ಯೆ ಹೆಚ್ಚುತಿರುವುದರಿಂದ ಅಲ್ಲಿಗೆ ಈ ಗೋದಿಯನ್ನು ೮ ವಿಶೇಷ ಗಾಡಿಗಳಿಂದ ಕಳಿಸಲಾಗುತ್ತದೆ. ದಿಲ್ಲಿಗೆ ಬಟ್ಟೆಯನ್ನೂ ಕಳಿಸುವ ವ್ಯವಸ್ಥೆ ಮಾಡಿದೆ.

ಮುಂಬಯಿ ಸರಕಾರದ ಗೃಹಮಂತ್ರಿಗಳಾದ ಮುರಾರಜಿ ದೇಸಾಯಿಯರು ಸುರತದಲ್ಲಿ ಸ್ಥಾನಿಕ ಸೇವಾದಲದ ಕಾರ್ಯಕರ್ತರನ್ನು ಕುರಿತು ಉಪದೇಶಿಸುತ್ತ ನೂರೆಂಟು ಸಂಘ ಸಂಸ್ಥೆಗಳನ್ನು ಹೊರಡಿಸಿ ಎಲ್ಲವನ್ನು ಬಲಹೀನಗೊಳಿಸುವ ದಕ್ಕಿಂತ ಒಂದೇ ಸಂಸ್ಥೆಯನ್ನು ಬಲಗೊಳಿಸಬೇಕೆಂದೂ ಸಾಮಾಜಿಕ ಕೆಲಸಗಾರರು ಸೇವಾದಲದಲ್ಲಿ ಇಷ್ಟೇ ಅಲ್ಲ ಉಳಿದ ಕೆಲಸಗಳನ್ನು ಕೈಕೊಳ್ಳಬೇಕೆಂದೂ ಉಪದೇಶಿಸಿದರು. ಸೇವಾದಲವು ಸರಕಾರೇತರ ಒಂದು ಸಂಸ್ಥೆಯಾಗಿ ಪ್ರಜಾಸತ್ತೆಯ ಬಲವನ್ನು ಹೆಚ್ಚಿಸಬೇಕೆಂದೂ ಅವರು ಹೇಳಿದರು.

ಹಿಂದುಸ್ಥಾನದ ಮುಸಲ್ಮಾನರು ಪಾಕಿಸ್ತಾನದಲ್ಲಿ ಎಕರೆಗೆ ೧೦೦೦೦ ರೂಪಾಯಿಗಳ ವರೆಗೆ ಕೊಟ್ಟಾದರೂ ಭೂಮಿಯನ್ನು ಕೊಳ್ಳುತಿರುವರು. ಹಿಂದುಸ್ಥಾನದಿಂದ ಹೇಳಿಕೊಳ್ಳುವಷ್ಟು ಮೂಲ ಧನ ಹೊರಗೆ ಹೋಗುತಿದೆಂದು ಅಧಿಕಾರಿ ವರ್ಗದಿಂದ ತಿಳಿಯುತ್ತದೆ.

ಪಾಕಿಸ್ತಾನದ ಆಹಾರ ಪರಿಸ್ಥಿತಿಯ ಮೂಲಕ ಅಲ್ಲಿಂದ ೨೫೦ ಕೋಟಿ ರೂಪಾಯಿಗಳಷ್ಟು ಮೂಲ ಧನವು ಹಿಂದುಸ್ಥಾನಕ್ಕೆ ಸ್ಥಾನಾಂತರಿಸಲ್ಪಟ್ಟಿದೆಯೆಂದು ವಿಶ್ವಸನೀಯವಾಗಿ ತಿಳಿಯುತ್ತದೆ. ಹಿಂದೀ ಉದ್ಯೋಗಗಳಿಗೆ ಈ ಮೂಲ ಧನ ವಿನಿಯೋಗಿಸಲ್ಪಡುವದಂತೆ.

---

ಜಾಡಚಾರ್ಲಾದಲ್ಲಿ ಮಹಬೂಬನಗರ ಜಿಲ್ಲಾ ಕಾಂಗ್ರೆಸ ಸಮಿತಿಯ ಅಧ್ಯಕ್ಷರಾದ ಶ್ರೀ ಹನುಮಂತರಾವ, ಶ್ರೀ ಏಗೂರ ಚನ್ನಪ್ಪ ಸೂರ್ಬಿ ವೆಂಕಟಿಕೇಶ ಶರ್ಮ, ಮಲ್ಲಪ್ಪ, ಕೊಟ್ಟ ಕೇಶವಲು, ಪೆದ್ದ ಮಂಡಳ ಖಂಡೇರಾವ ಇವರು ಬಂಧಿಸಲ್ಪಟ್ಟರು. ಶ್ರೀಗಳಾದ ವೆಂಕರೆಡ್ಡಿ, ವೆಂಕಟರಾವರೆಡ್ಡಿ ಮತ್ತು ಬಾಳಕೃಷ್ಣರೆಡ್ಡಿಯವರನ್ನು ಬಂಧಿಸಿ ಕೂಡಲೆ ಮಹಬೂಬ ನಗರಕ್ಕೆ ಒಯ್ಯಲಾಯಿತು.

## ಹೊಸದಿಲ್ಲಿ

ದಿಲ್ಲಿ ಜಿಲ್ಹೆಯಲ್ಲಿಯ ಸೀಖರು ಒಂಭತ್ತು ಇಂಚಿಗಿಂತ ಉದ್ದವಿದ್ದ ಕೃಪಾಣಗಳನ್ನು ಧರಿಸಕೂಡದೆಂದು ಜಿಲ್ಹಾ ಮ್ಯಾಜಿಸ್ಟ್ರೇಟರು ಅಜ್ಞೆ ಹೊರಡಿಸಿರುವರು. ಧಾರ್ಮಿಕ ಕುರುಹಾದ ಕೃಪಾಣದ ದುರುಪಯೋಗ ಮಾಡಿಕೊಂಡದ್ದರಿಂದ ಮತ್ತು ಸೀಖರು ದಿಲ್ಲಿಯಲ್ಲಿ ಅನೇಕರ ಮೇಲೆ ಹಲ್ಲೆ ಮಾಡಿದ್ದರಿಂದ ಈ ನಿರ್ಬಂಧ ಹಾಕಲಾಗಿದೆಯೆಂದು ಕಾರಣ ಕೊಡಲಾಗಿದೆ.

ಸದ್ಯದ ಪರಿಸ್ಥಿತಿಯನ್ನನುಲಕ್ಷಿಸಿ ಗವ್ಹರ್ನರ ಜನರಲ್‌ರು ಹಾಗೂ ಅವರ ಪತ್ನಿಯವರು ಸದ್ಯಕ್ಕೆ ಯಾವದೇ ಸಮಾರಂಭದಲ್ಲಿ ಭಾಗ ವಹಿಸದಿರಲು ಹಾಗು ಸತ್ಕಾರ ಜರುಗಿಸದಿರಲು ನಿರ್ಣಯಿಸಿರುವರು. ಆದುದರಿಂದ ಅಮೇರಿಕನ್ ರಾಯಭಾರಿಗಳಾದ ಗ್ರೇಡಿಯವರು ತಾ. ೧೦ಕ್ಕೆ ಗವ್ಹರ್ನರ ಜನರಲ್‌ರ ಸತ್ಕಾರಕ್ಕಾಗಿ ಏರ್ಪಡಿಸಿದ್ದ ಸಮಾರಂಭ ಮುಂದರಿಸಲ್ಪಟ್ಟಿತು.

ಗಲಭೆ ಪೀಡಿತ ದಿಲ್ಲಿಯಲ್ಲಿ ೯ನೇ ತಾರೀಕು ಅನೇಕರಲ್ಲಿಯಂತೆ ಹಿಂದುಸ್ಥಾನದ ಮುಖ್ಯ ಮಂತ್ರಿಗಳಾದ ಪಂಡಿತ ಜವಾಹರಲಾಲರಲ್ಲಿಯೂ ಆಹಾರದ ಕೊರತೆಯಿತ್ತು. ಅವರ ಆಳು ಹೇಸ್ಟಿಂಗ್ಜ ಬೀದಿಯಲ್ಲಿಯ ಸೀದಾ ಅಂಗಡಿಗೆ ಹೋಗಿ ಸಾಲಿನಲ್ಲಿ ನಿಂತು ಸೀದಾ ತೆಗೆದುಕೊಳ್ಳಲು ಸಿದ್ಧನಾದನು. ಆದರೆ ಅಷ್ಟರಲ್ಲಿ ಅಂಗಡಿಕಾರನು ಧಾನ್ಯವಿಲ್ಲೆಂದು ಹೇಳಿದ್ದರಿಂದ ಆ ಆಳು ಹಾಗೆಯೇ ತಿರುಗಿ ಹೋಗಿ ಪಂಡಿತ ಜವಾಹರಲಾಲರಿಗೆ ಹೇಳಿದನು. ಕೂಡಲೆ ಅವರು ಸ್ವತಃ ಅಂಗಡಿಗೆ ಹೋಗಿ ಬಂದವರಿಗೆಲ್ಲ ಧಾನ್ಯ ಹಂಚಲೇ ಬೇಕೆಂದು ಹೇಳಿದ್ದರಿಂದ ಅಂಗಡಿಕಾರನು ಧಾನ್ಯ ಹೊರದೆಗೆದು ಎಲ್ಲರಿಗೂ ಹಂಚಿದನು. ಜವಾಹರಲಾಲರ ಆಳಿಗೂ ಸೀದಾ ಸಿಕ್ಕಿತು.

ಪೂರ್ವ ಪಂಜಾಬಿನಲ್ಲಿಯ ೩ ಹಿಂದೀ ಸೈನ್ಯ ಪಡೆಗಳ ಮೇಲೆ ಹಿಂದೀ ಸೈನ್ಯಾಧಿಕಾರಿಗಳನ್ನು ನೇಮಿಸಲಾಗಿದೆ. ಜಲಂಧರದಲ್ಲಿ ಬ್ರಿಗೇಡಿಯರ ತಿಮ್ಮಯ್ಯ, ಗುರುದಾಸಪುರದಲ್ಲಿ ಬ್ರಿಗೇಡಿಯರ ಪರಾಂಜಪೆ ಮತ್ತು ಫಿರೋಜಪುರದಲ್ಲಿ ಬ್ರಿಗೇಡಿಯರ ಸಂತಸಿಂಗರು ನೇಮಿಸಲ್ಪಟ್ಟಿದ್ದಾರೆ.

ಗವರ್ನರ ಜನರಲ್ ಮೌಂಟಬ್ಯಾಟನ್ ಮತ್ತು ಅವರ ಪತ್ನಿಯವರು ಸಿಮ್ಲಾಕ್ಕೆ ಹೋಗುವ ತಮ್ಮ ಯೋಜನೆಯನ್ನು ಮುಂದೂಡುವರೆಂದು ತಿಳಿಯುತ್ತದೆ. ಸಪ್ಟಂಬರ ತಿಂಗಳಲ್ಲಿ ಅವರು ಎಲ್ಲಿಯೂ ಹೋಗುವದಿಲ್ಲ.

ದಿಲ್ಲಿ ಸೀದಾಧಿಕಾರಿಗಳ ವರದಿಯಂತೆ ಈಗ ೨ ಲಕ್ಷ ನಿರಾಶ್ರಿತರು ಬಂದಿರುವರು ಶಿಬಿರಗಳಲ್ಲಿ ಮತ್ತು ಅಪ್ತೇಷ್ಟರಮನೆಗಳಲ್ಲಿ ಇವರೆಲ್ಲ ಬಿಡಾರ ಹಾಕಿದ್ದಾರೆ. ನಿರಾಶ್ರಿತರ ಶಿಬಿರದಲ್ಲಿ ಬಂದವರೆಲ್ಲ ಇದ್ದು ಬಿದ್ದುದನ್ನೆಲ್ಲ ಕಳಕೊಂಡಿರುವದರಿಂದ ಸರಕಾರದವರು ಅವರಿಗೆ ಪುಕ್ಕಟೆ ಆಹಾರ, ಸೀದಾ ಹಾಗು ಬಟ್ಟೆಗಳನ್ನು ಒದಗಿಸುತಿದ್ದಾರೆ.

ಸಪ್ಟಂಬರ ೧೧ ಕ್ಕೆ ಹಿಂದುಸ್ಥಾನಕ್ಕೆ ಮರಳಲಿದ್ದ ಡಾ. ಬಿ. ಸಿ. ರಾಯರು ಹೊಸದಿಲ್ಲಿಯಿಂದ ಹೋದ ತಂತಿ ಸಂದೇಶದ ಮೇರೆಗೆ ಈಗಲೆ ತಿರುಗಿ ಬರುವದಿಲ್ಲೆಂದು ತಿಳಿಯುತ್ತದೆ.

ಪಂಜಾಬದಲ್ಲಿ ನಡೆದ ಸಂಹಾರದಲ್ಲಿ ಬ್ರಿಟಿಶ್ ಗುಪ್ತಪೋಲೀಸರ ಕೈವಾಡವಿದೆಯೆಂದು ಲಾಹೋರಿನಿಂದ ಹೊರಡುವ ಪಾಕಿಸ್ತಾನ ಟಾಯಿಮ್ಸ ಸಾರುತ್ತದೆ. ಗುಪ್ತ ಪೋಲೀಸ ಶಾಖೆಯ ಬಿಡಲ್ ಎಂಬ ಅಧಿಕಾರಿಗಳಿಗೆ ಬರೆದ ಪತ್ರವೇ ಈ ವಿಧಾನಕ್ಕೆ ಅಧಾರವಾಗಿದೆ.

## ಬಿಹಾರ

ಬಿಹಾರದ ಕಂಡಾಯ ಮಂತ್ರಿಗಳಾದ ಶ್ರೀಕೃಷ್ಣ ವಲ್ಲಭ ಸಹಾಯರು ೮ ನೇ ತಾರೀಕು ಮುಂಜಾನೆ ರಾಂಚಿ ಸಮೀಪದಲ್ಲಿಯ ಚಿತಪಾಲು ಘಾಟದಲ್ಲಿ ಮೋಟರ ಅಪಘಾತಕ್ಕೀಡಾಗಿ ತೀವ್ರ ಗಾಯಗೊಂಡಿದ್ದಾರೆ. ಅವರ ಎದೆ ಮತ್ತು ತಲೆಗೆ ಪೆಟ್ಟು ಬಿದ್ದಿದೆಂದು ತಿಳಿಯುತ್ತದೆ.

## ಮದ್ರಾಸ

ಘಟನಾ ಸಮಿತಿಯು ಭಾಷಾನುಗುಣ ಪ್ರಾಂತರಚನೆಯ ತತ್ವವನ್ನು ಒಪ್ಪಿಕೊಂಡಿದೆಯಾದರಿಂದ ಸ್ವತಂತ್ರ ತಮಿಳಪ್ರಾಂತವಾಗುವದು ಖಂಡಿತ. ಆ ಬಗ್ಗೆ ಅಕಾಲಿಕ ಚಳವಳಿಯನ್ನು ಪ್ರಾರಂಭಿಸಿ ಶಾಂತಿಗೆ ಭಂಗತರುವದು ಅನುಚಿತವೆಂದು ಮದ್ರಾಸಪ್ರಾಂತದ ಗೃಹಮಂತ್ರಿಗಳಾದ ಡಾ. ಸುಬ್ರಾಯನ್‌ರು ಮದ್ರಾಸಿನವ ತಮಿಳ ವಿದ್ಯಾರ್ಥಿ ಪರಿಷತ್ತನ್ನು ಉದ್ಘಾಟಿಸುತ್ತ ಹೇಳಿದರು.

ಪ್ರತ್ಯೇಕ ಅಂಧ್ರ ಪ್ರಾಂತವು ನಿರ್ಮಿತವಾಗಲೇ ಬೇಕೆಂದು ಮದ್ರಾಸಪ್ರಾಂತದ ಹಿಂದಿನ ಮುಖ್ಯ ಮಂತ್ರಿಗಳಾದಶ್ರೀ ಟ ಪ್ರಕಾಶಮರವರು ೧೯ನೇ ಅಂಧ್ರ ರಾಜಕೀಯ ಪರಿಷತ್ತನ್ನು ಉದ್ಘಾಟಿಸುತ್ತ ಒತ್ತಿಹೇಳಿದರು. ತಮಿಳರಿಂದ ಅಂಧ್ರರನ್ನು ಪ್ರತ್ಯೇಕಿಸುವ ಬಗ್ಗೆ ಭಿನ್ನಾಭಿಪ್ರಾಯವಿಲ್ಲ ಹೊಸ ಪ್ರಾಂತ ನಿರ್ಮಿಸುವ ಬಗೆಗೆ ಹಿಂದುಸ್ಥಾನ ಸರಕಾರಕ್ಕೆ ಎಲ್ಲ ಅಧಿಕಾರವಿದೆ ಈ ಬಗ್ಗೆ ಒಕ್ಕೂಟ ಘಟನೆಯ ಹಾದಿನೋಡುವ ಅವಶ್ಯಕತೆಯಿಲ್ಲ ಎಂದೂ ಅವರು ಹೇಳಿದರು.

ಮದ್ರಾಸ ದಿಲ್ಲಿ ವಿಮಾನ ಸಾರಿಗೆಯನ್ನು ನಿಲ್ಲಿಸಲಾಗಿದೆ. ಗ್ರ್ಯಾಂಡ ಟ್ರಂಕ ಎಕ್ಸಪ್ರೆಸ್ ಗಾಡಿ ಸಪ್ಟ ೯ ನೇ ತಾರೀಕು ಮಥುರಾ ದಾಟಿಹೋಗಲಿಕ್ಕಿಲ್ಲೆಂದು ಪ್ರಕಟಿಸಲಾಗಿದೆ.

ಮದ್ರಾಸ ಸರಕಾರದವರು ಮಾರಾಟಕರವನ್ನು ಒಂದರಿಂದ ಮೂರು ಪೈಗಳವರೆಗೆ ಏರ್ಪಡಿಸಿದ್ದಾರೆ.

ಮಂತ್ರಿಮಂಡಳದ ಅಧ್ಯಕ್ಷಸ್ಥಾನವನ್ನು ಇನ್ನು ಮುಂದೆ ಗವರ್ನರರು ವಹಿಸದೆ ಮುಖ್ಯ ಮಂತ್ರಿಗಳೇ ವಹಿಸುವರೆಂದು ಮುಖ್ಯ ಮಂತ್ರಿಗಳು ಸಾರಿದರು.

ಅಕ್ಟೋಬರ ೧೧ರಿಂದ ಪಂಚಾಬ ತ್ರಿಚಿನಾಪಳ್ಳಿ ಮಧುರಾ, ನೆಲ್ಲೂರ ಗುಂಟೂರ, ದಕ್ಷಿಣ ಕನ್ನಡ ಮಲಬಾರ ಹಾಗು ನೀಲಗಿರಿ ಈ ಎಂಟು ಜಿಲ್ಹೆಗಳಲ್ಲಿ ಮದ್ಯ ಪ್ರತಿಬಂಧವನ್ನು ಜಾರಿಯಲ್ಲಿ ತರುವ ವ್ಯವಸ್ಥೆಯೆಲ್ಲ ಮುಗಿದಿದೆ.

## ಪಶ್ಚಿಮ ಬಂಗಾಲ

ಕಲಕತ್ತೆಯಲ್ಲಿ ಪೂರ್ಣ ಮದ್ಯಪಾನ ನಿರೋಧ ಕೈಕೊಳ್ಳುವ ಆಲೋಚನೆಯನ್ನು ಪಶ್ಚಿಮ ಬಂಗಾಲ ಸರಕಾರವು ನಡೆಸಿದೆ. ಕಲಕತ್ತೆಯೊಂದರಿಂದಲೆ ಸರಕಾರಕ್ಕೆ ಪ್ರತಿವಾರ ಐದು ಲಕ್ಷ ರೂಪಾಯಿ ಕುಡುಕರಿಂದ ಬರುತಿದೆ.

---

# ಪಾಕಿಸ್ತಾನ

---

## ಸಿಂಧ

ಕರಾಚಿಯ ಕೇಮುರಿಯಲ್ಲಿ ಒಂದು ಪುಸ್ತಕದ ಅಂಗಡಿ ಬಳಿಯಲ್ಲಿ ಶೀಖರೀರ್ವರ ಶವಗಳು ರಕ್ತದ ಮಡುವಿನಲ್ಲಿ ತೇಲಾಡುತಿದ್ದುದು ಕಂಡು ಬಂತು. ಬಂದರ ಪೋಲೀಸರು ಶೋಧ ನಡೆಸುತಿದ್ದಾರೆ.

ದಿಲ್ಲಿ ಹಾಗೂ ಪೂರ್ವ ಪಂಜಾಬದಲ್ಲಿಯ ಮುಸಲ್ಮಾನ ಅಲ್ಪಸಂಖ್ಯಾತರ ರಕ್ಷಣೆಯ ಬಗ್ಗೆ ವಿಚಾರ ಮಾಡಿ ಪಾಕಿಸ್ತಾನ ಸರಕಾರವು ಮಹತ್ವದ ನಿರ್ಣಯವನ್ನು ಸ್ವೀಕರಿಸಿತೆಂದು ತಿಳಿಯುತ್ತದೆ. ಗವರ್ನರ ಜನರಲ್ ಜಿನ್ನಾರ ಅಧ್ಯಕ್ಷತೆಯಲ್ಲಿ ೯ ಕ್ಕೆ ಈ ಸಭೆ ಕರಾಚಿಯನ್ನಿ ಸೇರಿದ್ದಿತು. ದಿಲ್ಲಿಗೆ ಹೋಗಿ ಲಾರ್ಡ ಮೌಂಟಬ್ಯಾಟನ್ ಮತ್ತು ಸರದಾರ ವಲ್ಲಭಭಾಯರನ್ನು ಕಂಡು ಬಂದ ಪಾಕಿಸ್ತಾನ ಮಂತ್ರಿ ಅಬ್ದುರ್ ರಬ ನಿಸ್ತಾರರು ಪರಿಸ್ಥಿತಿಯನ್ನು ವಿವರಿಸಿದರು.

ಕರಾಚಿಯಲ್ಲಿ ೮ ನೇ ತಾರೀಕು ರಾತ್ರಿ ೬ ಜನರ ಮೇಲೆ ಹಲ್ಲೆಯಾಗಿದ್ದು ಇಬ್ಬರಿಗೆ ಗಾಯಗಳಾಗಿವೆ. ೯ ರ ಮುಂಜಾನೆ ಒಬ್ಬನು ಕೊಲೆ ಮಾಡಲ್ಪಟ್ಟನು. ದಿಲ್ಲಿಯಿಂದ ಮುಸಲ್ಮಾನ ನಿರಾಶ್ರಿತರನ್ನು ತರಲು ೨೦ ವಿಮಾನಗಳು ಹೋಗಿರುತ್ತವೆ.

ಪಾಕಿಸ್ತಾನದ ಆಹಾರ ಪರಿಸ್ಥಿತಿಯು ನಿರೀಕ್ಷಿಸಿದಂತಿರದೆ ಕಠಿಣವಾಗುತಿದೆಯೆಂದು ಆ ಸರಕಾರದ ಪ್ರಕಟನೆ ಹೊರಟಿದೆ.

## ಪೂರ್ವ ಬಂಗಾಲ

ಹೌರಾ ಮತ್ತು ೨೪ ಪರಗಣೆ ಜಿಲ್ಹೆಗಳಲ್ಲಿ ನೆರೆ ಬಂದಿದೆಯೆಂದು ಸುದ್ದಿ ಬಂದಿದೆ. ಹೌರಾ ಜಿಲ್ಹೆಯ ಮೂರು ತಾಲೂಕುಗಳು ನೀರಲ್ಲಿ ನಿಂತಿವೆ. ೨೪ ಪರಗಣೆ ಜಿಲ್ಹೆಯಲ್ಲಿ ಒಂದು ಲಕ್ಷ ಎಕರೆ ಭೂಮಿ ನೀರಲ್ಲಿ ನಿಂತಿದೆ. ಬೆಳೆಗಳಿಗೆ ಹಾನಿಯಾಗಿದ್ದು ಮನೆಗಳು ಬಿದ್ದಿವೆ. ಚಿತಗಾಂಗ ಜಿಲ್ಹೆಯ ಬಹುಭಾಗದಲ್ಲಿ ವಿಪರೀತ ಮಳೆ ಬಿದ್ದದರಿಂದ ಬಹುಭಾಗ ನೀರಲ್ಲಿ ನಿಂತಿದೆ. ಗಾಡಿಗಳ ಓಡಾಟ ನಿಂತಿದೆ. ಬಿತ್ತಿದ ಬೇಳೆಗೆ ವಿಶೇಷ ಹಾನಿಯಾಗಿದೆ,

## ನಾಲ್ಕು ಮಾತು — ರಂಗನಾಥ ದಿವಾಕರ

### ದಿಲ್ಲಿಯಲ್ಲಿ ದಂಗೆ

ಪಂಜಾಬದ ಹತ್ಯಾಕಾಂಡದ ಸೆಕೆ ಹೋದವಾರದಲ್ಲಿ ದಿಲ್ಲಿಗೂ ಬಡಕೊಂಡಿತು. ಈ ನಾಲ್ಕು ಮಾತುಗಳನ್ನು ಬರೆಯುತಿರುವಾಗ ಸಹ ದಿಲ್ಲಿಯಲ್ಲಿಯ ದಂಗೆ ನಡೆದಿದೆ. ಹಾಗೂ ಅದು ಇನ್ನೂ ಬೆಳೆಯಬಹುದೋ ಏನೋ ಎಂಬ ಭಯ ನಮ್ಮನ್ನು ಬಿಟ್ಟಿಲ್ಲ. ಇಷ್ಟೇ ಅಲ್ಲ. ಈ ಸೆಕೆ ಇಡೀ ದೇಶಕ್ಕೆ ಎಲ್ಲಿ ಬಡಕೊಳ್ಳುವದೊ ಎಂಬ ಭಯವೂ ಇದೆ. ಪಶ್ಚಿಮ ಪಂಜಾಬದಿಂದ ಅಂದರೆ ಪಾಕಿಸ್ತಾನ ಪಂಜಾಬದಿಂದ ಸುಮಾರು ಎರಡು ಲಕ್ಷಕ್ಕಿಂತ ಹೆಚ್ಚು ಜನರು ನಿರ್ವಾಸಿತರಾಗಿ ದಿಲ್ಲಿಗೆ ಬಂದು ಬಿಟ್ಟರು. ಅವರು ಬರುವಾಗ ಅಲ್ಲಿಯ ಹತ್ಯಾಕಾಂಡದ ಭಯಾನಕ ಕಥೆಗಳನ್ನು ಹೇಳುತ್ತಲೆ ಬಂದರು. ನಾನು ಮೊಟ್ಟಮೊದಲು ೧೮-೮-೪೭ರ ದಿನ ದಿಲ್ಲಿಯ ಒಂದು ನಿರ್ವಾಸಿತರ ಶಿಬಿರವನ್ನು ನೋಡಲು ಹೋಗಿದ್ದೆನು. ಅಲ್ಲಿ ನೂರಾರು ಡೇರೆಗಳು ಹಾಕಲಾಗಿದ್ದವು. ನೂರಾರು ಜನರು ಗಂಡಸರು, ಹೆಂಗಸರು, ಮಕ್ಕಳು, ಮುದುಕರು ಗಂಟುಗದಡಿ ಕಟ್ಟಿಕೊಂಡು ಒಂದೇ ಸವನೆ ಅಲ್ಲಿ ಬರುತಲೆ ಇದ್ದರು. ಅತ್ಯಂತ ಚಿಂತೆಯಿಂದ ವ್ಯಾಕುಲರು, ಹೀನ ದೀನ ಭಾವಗ್ರಸ್ತರು, ಹೌಹಾರಿ ಹೋದವರು ಅನೇಕರು ಅಲ್ಲಿಅಸ್ತವ್ಯಸ್ತ ಸ್ಥಿತಿಯಲ್ಲಿ ಏನು ಮಾಡಬೇಕು ಏನು ಬಿಡಬೇಕು ಎಂಬುದು ತಿಳಿಯದೆ ಅಲೆದಾಡುವದು ಕಂಡು ಬರುತ್ತಿತ್ತು. ಪ್ರಶ್ನೆಗಳನ್ನು ಕೇಳಿದರೆ ಹಲವರು ಉತ್ತರ ಕೊಡುವ ಸ್ಥಿತಿಯಲ್ಲಿ ಕೂಡ ಇರಲಿಲ್ಲ. ಅವರ ಕಣ್ಣಲ್ಲಿ ನೀರು ಸುರಿಯಲಾರಂಭಿಸುತ್ತಿದ್ದವು. ಲಾಹೋರದಿಂದ ವಿಮಾನ ಮಾರ್ಗದಿಂದ ಹಲವರು ತರಲಾದರು. ಅವರಲ್ಲಿ ನಾಲ್ಕೆಂಟು ಹೆಣ್ಣುಮಕ್ಕಳು ಉನ್ಮಾದ ವಾಯುವಿನಿಂದ (ಹಿಸ್ಟೇರಿಯಾ) ಹುಚ್ಚು ಹಿಡಿದದ್ದೂ ಉಂಟು. ನಾನು ಜನರನ್ನು ಮಾತಾಡಿಸುತ್ತ ಸಮಾಧಾನ ಹೇಳುತ್ತ ಕೇಳುತ್ತ ಹೋಗುತಿರುವಷ್ಟರಲ್ಲಿ ೮—೧೦ ಸೀಖರು ಸೈನಿಕರ ವೇಷದಲ್ಲಿ ಆ ಶಿಬಿರಕ್ಕೆ ಬಂದರು. ಅವರು ಅತ್ಯಂತ ಆವೇಶದಿಂದ ಶಿಬಿರದಲ್ಲಿ ಹೊಕ್ಕರು. 'ಏನುಬೇಕು; ಏತಕ್ಕೆ ಬಂದಿರಿ' ಎಂದು ಕೇಳಲು ಅವರು ಉದ್ರೇಕ ಭಾವದಿಂದಲೆ 'ನಮ್ಮ ಜನರು ಯಾರು ಎಲ್ಲಿಂದ ಬಂದಿರುವರು, ಅದನ್ನು ನೋಡಲು ಬಂದೆರುವೆವು' ಎಂದು ಆತುರ ಭಾವದಿಂದ ನುಡಿದರು.

× × ×

ಇದನೆಲ್ಲ ನೋಡುತ್ತ ಜನರನ್ನು ಮಾತಾಡಿಸುತ್ತಿರುವಾಗಲೆ ಶ್ರೀ. ಸುಚೇತಾ ಕೃಪಲಾನಿಯವರು ಅಲ್ಲಿಗೆ ಕಾರ್ಯಕರ್ತರ ತಂಡದೊಡನೆ ಬಂದರು. ಬಲೂಚಿ ಸೈನಿಕರೆ ಅನೇಕ ಅತ್ಯಾಚಾರಗಳನ್ನು ನಡೆಸಿರುವರೆಂದು ಅವರು ಹೇಳಿದರು. ಅದೇ ಅವರ ಕಿವಿಗೆ ಬಿದ್ದ ಒಂದು ಕಥೆಯನ್ನು ಅವರು ವಿವರಿಸಿದರು. ಲಾಹೋರದಿಂದ ಬರುತ್ತಿರುವ ಒಂದು ರೇಲು ಗಾಡಿಯನ್ನು ತರುಬಿ ಸುಮಾರು ನಾಲ್ವತ್ತು ಸ್ತ್ರೀಯರನ್ನು ಎಳೆದುಕೊಂಡು ಹೋಗಿ ಅಡ್ಡ ಬಂದವರನ್ನೆಲ್ಲ ಕತ್ತರಿಸಿ ಬಿಟ್ಟು ಹೆಣ್ಣುಮಕ್ಕಳನ್ನು ಒಂದು ಲಾರಿಯಲ್ಲಿ ತುಂಬಿ ಒಯ್ದು ಬಿಟ್ಟರು ಎಂಬದೆ ಆ ಕಥೆ. 'ಇಂಥ ನಾನಾ ತರದ ಅನೇಕ ಕಥೆಗಳನ್ನು ಹೇಳುತ್ತ ಬಂದ ಸಾವಿರಾರು ನಿರ್ವಾಸಿತರು ನಿತ್ಯ ದಿಲ್ಲಿಗೆ-ಬರುತ್ತ ಹೋದರೆ ದಿಲ್ಲಿಯ ವಾತಾವರಣವು ಹೇಗೆ ಶಾಂತವುಳಿಯಬೇಕು ? ಈ ಬಗ್ಗೆ ಏನು ವಿಚಾರ ಮಾಡಿರುವಿರಿ ! ಎಂದು ನಾನು ಸುಚೇತಾದೇವಿಯವರನ್ನು ಕೇಳಿದೆನು. ಅದಕ್ಕೆ ಅವರೇನು ಉತ್ತರ ಕೊಡಬೇಕು ? 'ಆದದ್ದಾಯಿತು, ಮಾಡುವದೇನು' ಅಂದರು.

× × ×

ಇದು ಹಿಂದು ಸೀಖ ನಿರ್ವಾಸಿತರ ಸ್ಥಿತಿ. ಅದೇ ರೀತಿ ಭವ್ಯವಾದ ಜುಮ್ಮಾ ಮಸೀದೆಯ ಎದುರಿನ ಒಂದು ದೊಡ್ಡ ಶಿಬಿರದಲ್ಲಿ ೫-೬ ಸಾವಿರದಷ್ಟು ಮುಸಲ್ಮಾನ ನಿರ್ವಾಸಿತರು, ಅಲ್ವಾರ ಮುಂತಾದ ಭಾಗಗಳಿಂದ ಬಂದವರು ತಳವೂರಿದ್ದರು. ಅವರನ್ನು ಕೇಳಿದರೂ ಅವರೂ ಅನೇಕ ಭಯಾನಕ ಕಥೆಗಳನ್ನು ಹೀಗೆಯೇ ಹೇಳುವರು. ಆ ಕಥೆಗಳ ಪ್ರಸಾರ ಮುಸಲ್ಮಾನರಲ್ಲಿ ಆಗುತ್ತ ಹೋಗುವದು. ಹೀಗಾದ ಬಳಿಕ ದಿಲ್ಲಿಯಲ್ಲಿ ಶಾಂತಿ ಹೇಗೆ ಉಳಿಯಬೇಕು ? ಇಷ್ಟು ದಿನ ಶಾಂತತೆ ಉಳಿದುದೇ ಹೆಚ್ಚಿನದು ಎಂದು ಹೇಳಬಹುದು. ಇದೇ ಪರಿ ಎಲ್ಲ ಕಡೆಗೂ ಆಗುತ್ತ ನಡೆಯುವ ! ಭಯವಿದೆ. ಆದುದರಿಂದ 'ದಿಲ್ಲಿ ನಮಗೆ ದೂರವಿದೆ, ನಮ್ಮಲ್ಲಿ ಪೂರ್ಣ ಶಾಂತಿಯಿದೆ' ಎಂದು ಸಮಾಧಾನ ಹಚ್ಚಿಕೊಂಡು ಸುಮ್ಮನಿರುವದು ಎಂದೂ ಯೋಗ್ಯವಾಗಲಾರದು. ಎಲ್ಲರೂ ಅತ್ಯಂತ ಎಚ್ಚರಿಕೆಯಿಂದಿರುವದು ಹಾಗೂ ಭಾವೋದ್ರೇಕವಾಗದಂತೆ ನೋಡಿಕೊಳ್ಳುವದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಿರುವದು.

× × ×

ಪಾಕಿಸ್ತಾನದ ಪ್ರಾರಂಭ ಎಷ್ಟು ಶಾಂತ ರೀತಿಯಿಂದ ಆಗಬೇಕೆಂದು ಎಲ್ಲರೂ ಎಣಿಸಿದರೋ, ಅಷ್ಟು ಅದು ಭಯಾನಕ ಹಾಗೂ ಅಶುಭ ವಾತಾವರಣದಲ್ಲಿ ಆದುದು ಬಹಳ ದುರ್ದೈವದ ಸಂಗತಿ. ಕಾರಣಗಳೇನೇ ಇರಲಿ, ಪಾಕಿಸ್ತಾನವಾಗಬೇಕೆಂಬ ನಿಶ್ಚಯವಾದ ಬಳಿಕ ಅದು ಸುವ್ಯವಸ್ಥಿತವಾಗಿ ಆಗುವದು ಹಾಗೂ ನಡೆಯುವದು ಅತ್ಯವಶ್ಯ. ಆ ಬಗ್ಗೆ ಹಿಂದುಸ್ತಾನದವರು ಕೂಡ ಎಲ್ಲ ರೀತಿಯಿಂದ ಪ್ರಯತ್ನಪಡುವದು ಅವಶ್ಯ. ಪಾಕಿಸ್ತಾನ ಹಾಗೂ ಇಂಡಿಯಾ ಇವೆರಡೂ ಇನ್ನೂ ಒಂದೇ ದೇಶದ ಎರಡು ಭಾಗಗಳು. ಅಲ್ಲಿ ತೊಂದರೆಯಾದರೆ ಇಲ್ಲಿಯೂ ಆಗುವದು. ಅದು ಕಷ್ಟಕ್ಕೀಡಾದರೆ ಇದೂ ಕಷ್ಟಕ್ಕೀಡಾಗುವದು. ಆದುದರಿಂದ ಕೇವಲ ಇಂಡಿಯಾ ದೇಶದ ಹಿತಸಂಬಂಧದ ದೃಷ್ಟಿಯಿಂದ ನೋಡಿದರೂ ಪಾಕಿಸ್ತಾನದ ಬಾಳುವೆ ಸುಸೂತ್ರವಾಗಿ ನಡೆಯುವದು ನಮಗೆ ಇಷ್ಟವು. ಅದೇ ರೀತಿ ಜಾತೀಯ ಗಲಭೆಯನ್ನು ತಡೆಯುವದು ಹಾಗೂ ಜಾತೀಯ ಶಾಂತಿಯನ್ನು ಸಂರಕ್ಷಿಸುವದು ಈ ಎರಡೂ ಭಾಗಗಳಿಗೂ ಅತ್ಯವಶ್ಯ. ಅವರು ಹಾಗೆ ಮಾಡಿದರೆಂದು ನಾವು ಹೀಗೆ ಮಾಡುತ್ತೇವೆ. ಮುಯ್ಯಕ್ಕೆ ಮುಯ್ಯ ತೀರಿಸುತ್ತೇವೆ ಎಂದು ಅನ್ನುವದು ಎಷ್ಟೇ ಸ್ವಾಭಾವಿಕವಿದ್ದರೂ ಕಾಣಲು ಎಷ್ಟೇ ಚಂದಕಂಡರೂ ಅದರಿಂದ ಇಷ್ಟಸಾಧ್ಯವಾಗದು ಎಂಬುದನ್ನು ಎಲ್ಲರೂ ಲಕ್ಷ್ಯದಲ್ಲಿಡತಕ್ಕ ಸಂಗತಿಯಾಗಿದೆ. ಈಗ ದಿಲ್ಲಿಯ ದಂಗೆಯ ವಿಷಯವನ್ನೇ ವಿಚಾರಿಸಿದರೆ, ಅಲ್ಲಿ ದಂಗೆ ಪ್ರಾರಂಭಿಸಿದೊಡನೆ ಪಶ್ಚಿಮ ಪಂಜಾಬದಿಂದ ನಿರ್ವಾಸಿತರನ್ನು ಇತ್ತ ತರುವ ಕೆಲಸಕ್ಕೆ ವಿಘ್ನ ಬಂದು ಬಿಟ್ಟಿತು. ಈಗಾಗಲೇ ಸುಮಾರು ೧೫ಲಕ್ಷ ನಿರ್ವಾಸಿತರು ಪಶ್ಚಿಮ ಪಂಜಾಬವನ್ನು ಬಿಟ್ಟುಹೊರಬಿದ್ದಿದ್ದಾರೆ. ಆದರೆ ಇನ್ನೂ ೧೦ ಲಕ್ಷದಷ್ಟು ಜನರನ್ನು ಹೊರಗೆ ತರಬೇಕಾದೀತು. ಅದು ಶಾಂತ ವಾತಾವರಣದಲ್ಲಿ ಆದರೆ ಮಾತ್ರ ಸುಸೂತ್ರವಾಗಬಲ್ಲದು. ಇಲ್ಲದಿದ್ದರೆ ಜನರು ಭಯಂಕರ ಹಾನಿಗೆ ಹಾಗೂ ಕಷ್ಟಕ್ಕೆ ಗುರಿಯಾಗುವದು ನಿಶ್ಚಯ. ಈ ರೀತಿ ಯಾವದೇ ದೃಷ್ಟಿಯಿಂದ ನೋಡಿದರೂ ಶಾಂತಿಯು ಪ್ರಥಮ ಸ್ಥಾಪಿತವಾಗಲಿಕ್ಕೆಬೇಕು. ಆ ಶಾಂತಿಸಂರಕ್ಷಣೆ ಕೇವಲ ಸೈನಿಕರ ಮೇಲೆ ಇಲ್ಲವೆ ಪೋಲೀಸರಮೇಲೆ ಇಲ್ಲ. ಆದರೆ ಅದು ಪ್ರತಿಯೊಬ್ಬ ನಾಗರಿಕನ ಮೇಲೆ ಇದೆ. ಈ ಮಾತನ್ನು ಎಲ್ಲರೂ ತಿಳಿದುಕೊಂಡು ನಡೆದರೆ ಹಾಗೂ ಪ್ರತ್ಯಕ್ಷ ಆಚರಣೆಮಾಡಿದರೆ ಮಾತ್ರ ಪರಿಸ್ಥಿತಿ ಸುಧಾರಿಸುವದು. ಇಲ್ಲದಿದ್ದರೆ ಈಗಿದ್ದಕ್ಕಿಂತಲೂ ಭಯಾನಕಸ್ಥಿತಿಯಾಗಿ ನಾವು ಯಾವ ಗತಿಗೆ ಮುಟ್ಟುವೆವೊ ತಿಳಿಯದೆ ಹೋಗುವದು.

### ಹೈದ್ರಾಬಾದ

ಹೈದ್ರಾಬಾದ ಸ್ಥಿತಿ ದಿನೇ ದಿನೇ ವಿಕೋಪಕ್ಕೆ ಹೋಗುತ್ತಿದೆ ಎಂಬುದು ಅಲ್ಲಿಂದ ದಿನಾಲು ಬರುತಿರುವ ಸುದ್ದಿಗಳ ಮೇಲಿಂದ ಸ್ಪಷ್ಟವಾಗುವದು. ಹೈದ್ರಾಬಾದ ಸ್ಟೇಟ ಕಾಂಗ್ರೆಸ್ಸಿನವರು ಹೂಡಿದ ಸತ್ಯಾಗ್ರಹಕ್ಕೆ ಎಲ್ಲೆಲ್ಲಿಯೂ ಪ್ರಚಂಡ ಬೆಂಬಲ ದೊರೆಯುತಿದೆ. ನಿಜಾಮ ಕರ್ನಾಟಕ ಭಾಗದಲ್ಲಿಯೂ ಈಗಾಗಲೆ ನೂರಾರು ಜನರು ಸತ್ಯಾಗ್ರಹ ಮಾಡಿ ಸೆರೆಮನೆ ಸೇರಿರುವರು ನಿಜಾಮ ಸಾಹೇಬರು ಫರ್ಮಾನುಗಳ ಸುರಿಮಳೆ ಸುರಿಸಿ ಸತ್ಯಾಗ್ರಹವನ್ನು ಹತ್ತಿಕ್ಕಲು ಯತ್ನಿಸುವರು ಆದರೆ ಅದು ಅಸುಕೊಳ್ಳುವ ಲಕ್ಷಣವಿಲ್ಲ. ಅದನ್ನು ಈ ರೀತಿ ಹತ್ತಿಕ್ಕುವದು ಸಂಸ್ಥಾನದ ಹಿತದೃಷ್ಟಿಯಿಂದ ಯೋಗ್ಯವಲ್ಲವೆಂದು ನಾನು ಹೇಳದಿರಲಾರೆ. ಶಾಂತವಾಗಿ ಶಿಸ್ತಿನಿಂದ ನಡೆಸಲಾದ ಸತ್ಯಾಗ್ರಹವನ್ನು ಯಾವದೇ ಸರಕಾರದವರು ಒತ್ತಾಯದಿಂದ ಮುರಿಬಡಿಯಲೆತ್ನಿಸಿದರೆ ಆ ಯತ್ನವು ಎಂದೂ ಯಶಸ್ವಿಯಾಗಿಲ್ಲ. ಇಷ್ಟೇ ಅಲ್ಲ. ಎಷ್ಟೋಸಾರೆ ಆ ಚಳವಳಿ ವಿಕೃತ ಸ್ವರೂಪವನ್ನು ತಾಳುವ ಸಂಭವವಿರುತ್ತದೆ. ಹಾಗೆ ಆಗುವದು ರಾಜ ಪ್ರಜೆ ಇಬ್ಬರಿಗೂ ಹಿತಕರವಲ್ಲ ಯಾಕಂದರೆ ಆಡಳಿತವು ಸಡಿಲಾಗಿ ಎಲ್ಲವೂ ಅಸ್ತವ್ಯಸ್ತ ಹಾಗು ವಿಸ್ಖಲಿತವಾಗಿ ಬಿಡುವದು. ಆದುದರಿಂದ ನಿಜಾಮ ಸರಕಾರದವರು ಶಾಂತ ರೀತಿಯಿಂದ ವಿಚಾರಿಸಿ ಸತ್ಯಾಗ್ರಹಚಳವಳಿಯ ಈ ವರೆಗಿನ ಇತಿಹಾಸವನ್ನು ಚೆನ್ನಾಗಿ ಪರಿಶೀಲಿಸಿ ಬ್ರಿಟಿಶ ಸರಕಾರದಂಥ ಬಲಾಢ್ಯ ಸರಕಾರವೇ ಸತ್ಯಾಗ್ರಹ ಶಕ್ತಿಗೆ ಮಣಿಯ ಬೇಕಾಯಿತೆಂಬುದನ್ನು ಲಕ್ಷಕ್ಕೆ ತಂದು ಪ್ರಜೆಗಳ ಯೋಗ್ಯ ಬೇಡಿಕೆಗಳಿಗೆ ಮನ್ನಣೆಕೊಡುವದು ಉಚಿತವೆಂದು ನಾನು ಘಂಟಾಘೋಷವಾಗಿ ಸಾರುವೆ. ಹೈದ್ರಾಬಾದ ಸ್ಟೇಟ ಕಾಂಗ್ರೆಸ್ಸಿನವರು ಈಗ ಬೇಡುತಿರುವ ಬೇಡಿಕೆಗಳಾದರೂ ಯಾವವು? ಹೈದ್ರಾಬಾದ ಸಂಸ್ಥಾನವು ಇಂಡಿಯಾ ಒಕ್ಕೂಟಕ್ಕೆ ಸೇರಬೇಕು, ಘಟನಾ ಸಮಿತಿಯಲ್ಲಿ ಭಾಗವಹಿಸಬೇಕು, ಹೈದ್ರಾಬಾದದಲ್ಲಿ ಜವಾಬ್ದಾರಿ ಸರಕಾರವನ್ನು ಸ್ಥಾಪಿಸಬೇಕು, ಇವೇ ಅವರ ಬೇಡಿಕೆಗಳು. ಇವು ಮೂರೂ ಅತ್ಯಂತ ಸಮಂಜಸವಿರುವವಷ್ಟೇ ಅಲ್ಲ. ಇವುಗಳು ಸಂಸ್ಥಾನದ ಆತ್ಯಂತಿಕ ಹಿತವನ್ನು ಸಾಧಿಸುವವು. ಒಕ್ಕೂಟಕ್ಕೆ ಸೇರುವದರಿಂದ ಸಂಸ್ಥಾನದ ಭದ್ರತೆ, ಸುಸೂತ್ರ ಜೀವನ ಸುತ್ತಲಿನ ಜನರೊಡನೆ ಏಕರಸತೆ ಇವು ಸಾಧಿಸುವವು. ಘಟನಾ ಸಮಿತಿಯಲ್ಲಿ ಭಾಗವಹಿಸುವದರಿಂದ ಭಾವೀ ಘಟನೆಯಲ್ಲಿ ತಕ್ಕ ಮಾರ್ಪಾಡುಗಳನ್ನು ಮಾಡುವದಕ್ಕೆ ಅವಕಾಶದೊರೆಯುವದು. ಜವಾಬ್ದಾರಿ ಸರಕಾರವನ್ನು ಸ್ಥಾಪಿಸುವದರಿಂದ ಈ ಕಾಲಮಾನಕ್ಕೆ ಸರಿಯಾಗಿ ರಾಜ್ಯಾಧಿಕಾರಗಳನ್ನು ಪ್ರಜೆಗಳಿಗೆ ಒಪ್ಪಿಸಿದಂತಾಗುವದು. ಪ್ರಜೆಗಳ ಸೊತ್ತನ್ನು ಪ್ರಜೆಗಳಿಗೆ ಒಪ್ಪಿಸುವದರಲ್ಲಿ ನ್ಯಾಯಬುದ್ಧಿಯೇ ಇರುವದು. ಅದರಲ್ಲಿ ತಮ್ಮ ಅಧಿಕಾರಹೋಯಿತು ಎಂದು ನಿಜಾಮ ಸರಕಾರದವರು ತಿಳಿದುಕೊಳ್ಳುವದು ತಪ್ಪಾಗುವದು

× × ×

ಇನ್ನು ನಿಜಾಮ ಸರಕಾರದವರು ಮೇಲೆ ಹೇಳಿದಸಮಂಜಸಮಾರ್ಗವನ್ನು ಅನುಸರಿಸದೆ ಹೋದರೆ ಪ್ರಜೆಗಳು ಏನುಮಾಡಬೇಕು ಹಾಗೂ ನಾವು ಅವರ ನೆರೆಹೊರೆಯವರು ಏನು ಮಾಡಬೇಕು ಇದು ನಮ್ಮೆಲ್ಲರ ಭವಿತವ್ಯದ ದೃಷ್ಟಿಯಿಂದ ಮಹತ್ವದ ಮಾತಾಗಿದೆ. ಹೈದ್ರಾಬಾದ ಸ್ಟೇಟ ಕಾಂಗ್ರೆಸ್ಸಿನವರು ಕೈಕೊಂಡ ಸತ್ಯಾಗ್ರಹವು ಅತ್ಯಂತ ಸಕಾಲದಲ್ಲಿ ಕೈಕೊಂಡದ್ದಾಗಿದೆ. ಹಾಗೂ ಅದು ಜನತೆಯಲ್ಲಿ ಪ್ರಚಂಡ ಜಾಗ್ರತೆಯನ್ನುಂಟು ಮಾಡಿದೆ. ದಬ್ಬಾಳಿಕೆಯನ್ನು ಎದುರಿಸುವ ಶಕ್ತಿಯನ್ನು ಜನರಲ್ಲಿ ಉಂಟುಮಾಡಿದೆ. ನಿರ್ಭಯತೆಯನ್ನು ನಿರ್ಮಾಣಮಾಡಿದೆ. ನಿರಂಕುಶ ರಾಜ್ಯತಂತ್ರ್ಯವನ್ನು ಸಡಿಲುಗೊಳಿಸಲು ಯಾವಶಕ್ತಿ ವಿಶ್ವಾಸಗಳು ಬೇಕೊ ಅವು ಜನರಲ್ಲಿ ಉಂಟಾಗುತ್ತಲಿವೆ. ಆದುದರಿಂದ ಚಾಚೂ ತಪ್ಪದೆ ಉಳಿದ ಯಾವ ಮಾರ್ಗಗಳಿಗೂ ಎಡೆಗೊಡದೆ ಈಗ ನಡೆದ ಮಾರ್ಗದಿಂದಲೆ ಸ್ಟೇಟ ಕಾಂಗ್ರೆಸ್ಸಿನವರು ಹಾಗೂ ಅವರ ಅನುಯಾಯಿಗಳು ನಡೆಯುತ್ತ ಹೋಗಬೇಕು. ನೆರೆಹೊರೆಯ ಪ್ರಾಂತದವರು ಅವರಿಗೆ ಈ ಕೆಲಸದಲ್ಲಿ ಪೂರ್ಣ ಬೆಂಬಲಿಗರಾಗಿ ನಿಲ್ಲಬೇಕು. ಹೈದ್ರಾಬಾದ ಎಂಬುದು ಕರ್ನಾಟಕ ಮಹಾರಾಷ್ಟ್ರ ಆಂಧ್ರ ಹೀಗೆ ಮೂರು ಪ್ರಾಂತಗಳ ಭಾಗಗಳು ಕೂಡಿ ಒಂದು ಸಂಸ್ಥಾನವಾಗಿದೆ. ಅದುದರಿಂದ ಮೂರೂ ಪ್ರಾಂತದವರಿಗೆ ಹೈದ್ರಾಬಾದಿನ ಸಂಬಂಧವಿದೆ. ಮೂರು ಪ್ರಾಂತದ.ಸಂಬಂಧಿಕರು, ಅಣ್ಣತಮ್ಮಂದಿರು ಅಕ್ಕತಂಗಿಯರು ಹೈದ್ರಾಬಾದಿನ ಪ್ರಜೆಗಳಾಗಿದ್ದಾರೆ. ಅಂದಬಳಿಕ ಈ ಅಗ್ನಿ ಪರೀಕ್ಷೆಯ ಕಾಲದಲ್ಲಿ ಆಯಾ ಪ್ರಾಂತದವರು ಆಯಾ ಪ್ರಾಂತದವರಾದ ಹೈದ್ರಾಬಾದ ಪ್ರಜೆಗಳಿಗೆ ಸರ್ವತೋಪರಿ ಸಹಾಯ ಮಾಡುವದು ಅತ್ಯಂತ ಕ್ರಮ ಪ್ರಾಪ್ತವಾದ ಕರ್ತವ್ಯವು. ಹೈದ್ರಾಬಾದ ಪ್ರಜೆಗಳು ಸತ್ಯವಾದ ಯೋಗ್ಯವಾದ ಬೇಡಿಕೆಗಳ ಪೂರ್ತಿಕೆಗಾಗಿ ಸತ್ಯಾಗ್ರಹವನ್ನು ಹೂಡಿದವರಾಗಿದ್ದಾರೆ. ಅವರ ಮೇಲೆ ಬಂದ ಗಂಡಾಂತರಗಳು ನಮ್ಮ ಮೇಲೆಯೆ ಬಂದವುಗಳೆಂದು ತಿಳಿದು ನಾವು ಅವರಿಗೆ ಸಹಾಯ ಮಾಡಲಿಕ್ಕೆ ಬೇಕು. ಅಂದರೆ ಈ ವಿಷಯದಲ್ಲಿ ವಿಜಯವು ಕಟ್ಟಿಟ್ಟದ್ದು.

### ಮೈಸೂರು

ಪೂರ್ಣ ಜವಾಬ್ದಾರ ಸರಕಾರದ ಸ್ಥಾಪನೆಯ ಬಗ್ಗೆ ಮೈಸೂರು ಸ್ಟೇಟ ಕಾಂಗ್ರೆಸ

—೧೪ನೇ ಪುಟಕ್ಕೆ

## ಪಾಕಿಸ್ತಾನದ ಲಾಭಹಾನಿ ಪತ್ರ

(೬ನೇ ಪುಟದಿಂದ)

ಆರ್ಥಿಕ ದೃಷ್ಟಿಯಲ್ಲಿಯೂ ಪಾಕಿಸ್ತಾನಕ್ಕೆ ಹಾನಿಯಾಯಿತೆ ಹೊರತು _ ಲಾಭವಾಗಲಿಲ್ಲ. ತನ್ನ ದೇಶದ ಗಡಿಗಳನ್ನು ಕಾಯ್ದುಕೊಳ್ಳಲು ಸಮರ್ಥವಿಲ್ಲದ ಈ ರಾಷ್ಟ್ರದ ಆಕ್ರಮಣಕ್ಕಾಗಿ ಪರರಾಷ್ಟ್ರಗಳು ಹೊಂಚು ಹಾಕಹತ್ತಿವೆ. ಇದನ್ನು ಯುದ್ಧ ಹೂಡಿ ಆಕ್ರಮಿಸದಿದ್ದರೂ ಆರ್ಥಿಕ ಸಹಾಯ ನೀಡುವ ನೆವದಿಂದ ಪರರಾಷ್ಟ್ರಗಳು ತಮ್ಮ ವರ್ಚಸ್ಸನ್ನು ಪಾಕಿಸ್ತಾನದಲ್ಲಿ ಸ್ಥಿರವಾಗಿ ಸ್ಥಾಪಿಸಬಲ್ಲವು. ಪಾಕಿಸ್ತಾನದ ಆಡಳಿತೆಯ ಯಂತ್ರವನ್ನು ಸಾಗಿಸಿಕೊಂಡು ಹೋಗುವ ಸಮರ್ಥರು ಅಲ್ಲಿಯ ಮುಸ್ಲಿಂರಲ್ಲಿ ಇಲ್ಲದ ಮೂಲಕ ಅಂಥವರನ್ನು ಕೂಡ ಅವರು ಹೊರಗಿನಿಂದಲೇ ಪಡೆಯಬೇಕಾಗುವದು. ಹೀಗೆ ಹೆಜ್ಜೆ ಹೆಜ್ಜೆಗೆ ಹೆರವರ ಮುಖ ನೋಡುವ ಪ್ರಸಂಗವನ್ನಿಟ್ಟುಕೊಂಡ ಪಾಕಿಸ್ತಾನದ ಸ್ವಾತಂತ್ರ್ಯವೆಂತು ಬಾಳಬಲ್ಲದೊ? ಇರಲಿ, ಪರರಾಷ್ಟ್ರಗಳ ನೆರವು ಪಡೆಯಬೇಕಾದಲ್ಲಿ ಮುಸ್ಲಿಂ ರಾಷ್ಟ್ರಗಳ ನೆರವನ್ನೇ ಪಡೆದುಕೊಳ್ಳುವೆವು. ಎಂದು ಅವರು ಹಟತೊಡಲೂ ಬರುವಂತಿಲ್ಲ. ಆ ಮುಸ್ಲಿಂ ರಾಷ್ಟ್ರಗಳೆಲ್ಲ ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು ಬಾಳಬೇಕಾದರೆ ಸಾಕುಬೇಕಾಗಿದೆ.

ಇಷ್ಟಾಗಿ ಪಾಕಿಸ್ತಾನವು ಒತ್ತಟ್ಟಿಗೇ ಅಖಂಡವಾಗಿರದೆ. ಪೂರ್ವ ಮತ್ತು ಪಶ್ಚಿಮ ಎಂದು ಎರಡು ಹೋಳಾಗಿದೆ. ಈ ಎರಡೂ ಪ್ರದೇಶಗಳಲ್ಲಿಯ ಸಂಬಂಧವನ್ನು ಹಿಂದುಸ್ತಾನದ ಸಹಕಾರವಿಲ್ಲದೆ ಇಟ್ಟುಕೊಳ್ಳಲು ಸಾಧ್ಯವಿಲ್ಲ. ಅದಂತೂ ಇರಲಿ, ಪಾಕಿಸ್ತಾನದಲ್ಲಿಯೆ ಇರುವ ಗಡಿನಾಡು ಪ್ರಾಂತವು ಪಾಕಿಸ್ತಾನವನ್ನು ಸೇರುವದಿಲ್ಲೆಂದು ಪ್ರತಿಭಟಿಸುತ್ತಿದೆ. ಇಷ್ಟೆಲ್ಲ ವಿಘ್ನಗಳನ್ನೆದುರಿಸಿ ಪಾಕಿಸ್ತಾನವೆಂತು ಬಾಳಬಲ್ಲದು?

## ಮೈಸೂರು ಸತ್ಯಾಗ್ರಹದಲ್ಲಿ ಬಂಧನದ ಮೇಲೆ ಬಂಧನ !

ಮೈಸೂರು ಕಾಂಗ್ರೆಸ್ಸಿನವರು ತಾ ೧ರಿಂದ ಜವಾಬ್ದಾರ ಸರಕಾರ ಸ್ಥಾಪಿಸುವ ಬಗ್ಗೆ ಸತ್ಯಾಗ್ರಹ ಪ್ರಾರಂಭಿಸಿದ್ದರಿಂದ ಸಂಸ್ಥಾನ ದಾದ್ಯಂತ ಧುರೀಣರನ್ನು ಬಂಧಿಸುವ ಅಜ್ಞೆ ಜಾರಿ ಮಾಡಲಾಗಿದೆ. ಮೈಸೂರು ಕಾಂಗ್ರೆಸ್ಸಿನ ಪ್ರಥಮ ಸರ್ವಾಧಿಕಾರಿಗಳಾದ ಶ್ರೀ ಚೆಂಗಲರಾಯರೆಡ್ಡಿ ಹಾಗೂ ಮೈಸೂರು ಕಾಂಗ್ರೆಸ್ ಕಾರ್ಯಸಮಿತಿಯ ಎಲ್ಲ ಸದಸ್ಯರ ಮೇಲೆ ವಾರಂಟು ಜಾರಿಮಾಡಿ ತಾ ೩ರ ಮಧ್ಯರಾತ್ರಿ ಎಲ್ಲರನ್ನೂ ಬಂಧಿಸಲಾಯಿತು. ಈ ಸತ್ಯಾಗ್ರಹದ ವಿಷಯವಾಗಿ ಸಂಸ್ಥಾನ ಕಾಂಗ್ರೆಸ್ಸಿನೊಡನೆ ಮಾತುಕತೆ ನಡೆಸಲು ಬಂದಿದ್ದ ಶ್ರೀ ಕೆ. ಕಾಮರಾಜ ನಾಡರರು ಶ್ರೀ ರೆಡ್ಡಿಯವರನ್ನು ಭೆಟ್ಟಿಯಾಗಿ ತಮಿಳುನಾಡು ಈ ಸತ್ಯಾಗ್ರಹಕ್ಕೆ ಸಂಪೂರ್ಣ ಬೆಂಬಲ ಕೊಡುವದೆಂದು ತಿಳಿಸಿದರು.

ಮೈಸೂರು ಸರಕಾರದವರು ಮುಂಬಯಿ ಕರ್ನಾಟಕ ಮತ್ತು ಮೈಸೂರು ಗಡಿಯು ಮೇಲಿದ್ದ ರಸ್ತೆಯು ಸೇತುವಿನ ಮೇಲೆ ಸೈನಿಕರನ್ನು ಸ್ಥಾಪಿಸಿ ಸತ್ಯಾಗ್ರಹಕ್ಕೆ ಕಾಲ್ತಿದಕು ಹಾಕಲು ಯತ್ನ ಮಾಡಿದ್ದಾರೆ. ಸತ್ಯಾಗ್ರಹದಲ್ಲಿ ಭಾಗವಹಿಸಲು ಮುಂಬಯಿ ಕರ್ನಾಟಕದಿಂದ ಬರುವ ಸತ್ಯಾಗ್ರಹಿಗಳನ್ನು ಬಲಾತ್ಕಾರದಿಂದ ತಡೆಹಿಡಿಯಲಾಗುತ್ತಿದೆ.

### ಮೈಸೂರಲ್ಲಿ ಕರ್ಫ್ಯೂ

ಇಡೀ ಪಟ್ಟಣದಲ್ಲಿ ಒಂದು ವಾರದ ವರೆಗೆ ಕರ್ಫ್ಯೂ ಆಜ್ಞೆಯನ್ನು ಅಮಲಿನಲ್ಲಿ ತರಲಾಗಿದೆ. ಕರ್ಫ್ಯೂ ಅವಧಿಯು ಸಂಜೆ ೬ ರಿಂದ ಮುಂಜಾನೆ ೬ ವರೆಗೆ ಇಡಲಾಗಿದೆ. ಈಗಿನಿಂದ ೧೬ ನೇ ದಿನಾಂಕದ ವರೆಗೆ ಹೋಗುವ ಮತ್ತು ಬರುವ ಎಲ್ಲ ಮೋಟಾರುಗಳ ಸಾಗಾಟವನ್ನು ಕಟ್ಟು ಮಾಡುವ ಅಜ್ಞೆಯೊಂದು ಜಿಲ್ಲಾ ಮ್ಯಾಜಿಸ್ಟ್ರೇಟರಿಂದ ಹೊರಡಿಸಲ್ಪಟ್ಟಿದೆ. ಅರಮನೆಯು, ನಗರ ಸಭೆಯು, ಸೈನಿಕರ, ಮತ್ತು ಅಂಚೆಯ ಮೋಟಾರುಗಳಿಗೆ ಈ ಅಜ್ಞೆ ಅನ್ವಯಿಸುವದಿಲ್ಲ.

ತಾ ೪ ರಲ್ಲಿ ಪೋಲೀಸರು ಮುಖಂಡರ ಬಂಧನದ ವಿರುದ್ಧವಾಗಿ ಮತ ಪ್ರದರ್ಶಿಸಲು ಕೂಡಿದ ಜನಸಮೂಹದ ಮೇಲೆ ಎರಡು ಕಡೆ ಒಟ್ಟು ೬ ಸಾರೆ ಗೋಳಿಬಾರು ಮಾಡಿದರು. ೫೦ ಜನರಿಗೆ ಗಾಯಗಳಾಗಿವೆಯೆಂದು ತಿಳಿಯುತ್ತದೆ.

ಈ ವರೆಗೆ ಒಟ್ಟು ೧೦೦ ಜನರನ್ನು ಬಂಧಿಸಲಾಗಿರುವದು. ಒಮ್ಮೆ ಸಂಜೆಯ ೭ ರಿಂದ ಬೆಂಗಳೂರಲ್ಲಿ ೩೬ ತಾಸುಗಳ ಕರ್ಫ್ಯೂ ಜಾರಿ ಮಾಡಲಾಯಿತು. ವ್ಯಾಪಾರಿಗಳು ಹರತಾಳ ಪಾಲಿಸಿದ್ದು ಅಂಗಡಿಗಳೆಲ್ಲ ಮುಚ್ಚಿವೆ.

ಮೈಸೂರ ಅರಮನೆ ಮುಂದೆ ಸತ್ಯಾಗ್ರಹ ಮಾಡಲು ಹೊರಟ ಸತ್ಯಾಗ್ರಹಿಗಳ ನಾಲ್ಕು ತಂಡಗಳನ್ನು ಪೋಲೀಸರು ಸುತ್ತುಗಟ್ಟಿ ಬಂಧಿಸಿದರು. ದಂಡಿನ ಪ್ರದೇಶದಲ್ಲಿ ಮೆರವಣಿಗೆ ತೆಗೆದ ಬಗ್ಗೆ ಇಬ್ಬರು ವಿದ್ಯಾರ್ಥಿಗಳನ್ನು ಬಂಧಿಸಿದ್ದಾರೆ.

ಬಂಧಿತರನ್ನು ಬಂಧಮುಕ್ತ ಮಾಡಲು ಕೇಳಲು ಸೆಂಟ್ರಲ್ ಪೋಲೀಸ ಸ್ಟೇಶನ್ ಮುಂದೆ ಗುಂಪುಗೂಡಿದ ೨೦೦೦ ಜನರನ್ನು ಚದುರಿಸಲು ಪೋಲೀಸರು ಗುಂಡುಹಾರಿಸಿದರು. ಜನರು ಗೊಂದಲ ಹಾಕಹತ್ತಿ ಕಲ್ಲುಗಳ ಸುರಿಮಳೆ ಮಾಡಿದ್ದೇ ಗೋಳಿಬಾರಿಗೆ ಕಾರಣವಾಯಿತೆಂದು ಹೇಳಲಾಗುತ್ತದೆ.

### ಶಿವಮೊಗ್ಗೆಯಲ್ಲಿ ಹರತಾಳ

ಮೈಸೂರು ಸಂಸ್ಥಾನ ಕಾಂಗ್ರೆಸ ಅಧ್ಯಕ್ಷರಾದ ಶ್ರೀ ಚಂಗಲರಾಯರೆಡ್ಡಿ ಭಾಷ್ಯಂ ಮೊದಲಾದವರನ್ನು ಸೆರೆಹಿಡಿದ ಸುದ್ದಿ ಬಂದ ಕೂಡಲೆ ಅಂಗಡಿಕಾರರು ಅಂಗಡಿ ಮುಚ್ಚಿ ಹರತಾಳ ಪಾಲಿಸಿದರು. ಹೋಟೆಲುಗಳೂ ಮುಚ್ಚಿದವು. ಶಿರಾಳಕೊಪ್ಪ, ಹೊನ್ನಳ್ಳಿ ಮೊದಲಾದ ಸ್ಥಳದಲ್ಲಿ ವಿದ್ಯಾರ್ಥಿಗಳ ಸತ್ಯಾಗ್ರಹವನ್ನು ಯಶಸ್ವಿ ಮಾಡಲು ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ್ಸಿನ ಕಾರ್ಯದರ್ಶಿಗಳಾದ ಶ್ರೀ ಶಾಂತಪ್ಪನವರು ಶಿವಮೊಗ್ಗೆಗೆ ಗಮಿಸಿದರು.

### ಮೈಸೂರು ನಗರ ಸಭೆಯ ಉಪಾಧ್ಯಕ್ಷರ ಕೈದು

ಮೈಸೂರು ನಗರಸಭೆಯ ಉಪಾಧ್ಯಕ್ಷರಾದ ನರಸಿಂಹ ಅಯ್ಯಂಗಾರ ಹಾಗೂ ಕಾಂಗ್ರೆಸ ಕಾರ್ಯಕರ್ತರಾದ ಪಿ. ರಾಮಣ್ಣ ಅವರು ಬಂಧಿಸಲ್ಪಟ್ಟರು. ಕಾಲೇಜ ಹಾಗೂ ಹಾಯಸ್ಕೂಲ ವಿದ್ಯಾರ್ಥಿಗಳು ಸಭೆ ಸೇರಿ ಬಂಧಿತ ಧುರೀಣರ ಮುಕ್ತತೆ ಹಾಗು ಜವಾಬ್ದಾರ ಸರಕಾರದ ಸ್ಥಾಪನೆ ಆಗುವ ವರೆಗೆ ಶಾಲೆ ಕಾಲೇಜುಗಳಿಗೆ ಹೋಗತಕ್ಕದ್ದಲ್ಲೆಂದು ನಿರ್ಣಯಿಸಿದರು. ೩೦೦೦ ಕೂಲಿಕಾರರು ಸಂಘಟಿತರಾಗಿ ಪ್ರಚಂಡ ಮೆರವಣಿಗೆ ತೆಗೆದಿದ್ದರು.

ಬೆಂಗಳೂರಲ್ಲಿ ತಾ. ೮ ರ ಮುಂಜಾನೆ ಕ್ಯಾಂಟೋನಮೆಂಟ ವಿಭಾಗದಲ್ಲಿ ಮೇಲಿಂದ ಮೇಲೆ ನಡೆದ ಗೋಳಿಬಾರುಗಳಲ್ಲಿ ಮೂವರು ಮರಣ ಹೊಂದಿದರು. ಒಬ್ಬನು ತತ್‌ಕ್ಷಣವೇ ಪ್ರಾಣಬಿಟ್ಟನು. ಇಬ್ಬರು ಅಸ್ಪತ್ರೆಯಲ್ಲಿ ಮಡಿದರು. ೨೧ ಜನರು ಗಾಯಗೊಂಡಿರುವರು. ಗಾಯಗೊಂಡವರಲ್ಲಿ ನಾಲ್ವರು ಅಸ್ವಸ್ಥ ಪರಿಸ್ಥಿತಿಯಲ್ಲಿದ್ದಾರೆಂದು ತಿಳಿಯುತ್ತದೆ.

ಪೋಲೀಸರು ಕ್ಯಾಂಟೂನಮೆಂಟಿನ ಪೇಟೆಯ ಕೇಂದ್ರ ಭಾಗದಲ್ಲಿ ಮೊದಲು ಗೋಳಿಬಾರು ಮಾಡಿದರು. ಕ್ಯಾವಲರಿ ರಸ್ತೆ ಮತ್ತು ಪೇಟೆಯ ರಸ್ತೆಯು ಕೂಡುವಲ್ಲಿ ಅದೇ ಕಾಂಗ್ರೆಸ ಸತ್ಯಾಗ್ರಹಿಗಳ ಮೆರವಣಿಗೆ ಬಂದಿತ್ತು. ಮೆರವಣಿಗೆಯನ್ನು ಚದುರಿಸಲು ಪೋಲೀಸ ಪಡೆಯವರು ಲಾಠೀಪ್ರಹಾರ ಮಾಡಿದರು. ಜನರು ಕಲ್ಲು ತೂರಲು ಪ್ರಾರಂಭಿಸಲು ಗೋಳಿಬಾರು ಮಾಡಿದರು.

ಒಂದು ಗುಂಡು ಒಬ್ಬ ಬಾಲಕನ ಎದೆಯಲ್ಲಿ ಹಾಯ್ದು ಹೋಯಿತು. ಅವನನ್ನು ಓರ್ವ ನಾಗರಿಕನು ಅಸ್ಪತ್ರೆಗೆ ಸಾಗಿಸಿದನು. ಹತ್ತಿರಿದ್ದ ಮನೆಯ ಅಟ್ಟದ ಮೇಲೆ ಕಿಡಿಕಿಯೊಳಗೆ ನಿಂತ ಒಬ್ಬ ಸಣ್ಣ ಹುಡುಗ ಮತ್ತು ಹುಡಿಗೆಯು ಗುಂಡಿನಿಂದ ಒಡೆದ ಕಿಡಿಕಿಯ ಕಾಜುಗಳಿಂದ ಗಾಯಗೊಂಡಿದ್ದಾರೆ. ಮತಪ್ರದರ್ಶಕರನೇಕರು ಬಂಧಿಸಲ್ಪಟ್ಟರು.

ಮೈಸೂರ ಶ್ರೀಮನ್ಮಹಾರಾಜರು ಪ್ರಜೆಗಳಿಗೆ ಒಂದು ಸಂದೇಶ ಕೊಟ್ಟು ಹೊಸ ಘಟನೆಯಲ್ಲಿ ಜೊತೆಗಾರ ಸಂಸ್ಥೆ ಸ್ಥಾಪನೆಯ ವ್ಯವಸ್ಥೆ ಮಾಡುವ ಇಚ್ಛೆ ಇರುವದಾಗಿ ಸಾರಿದ್ದಾರೆ. ಎಲ್ಲ ಪ್ರಜೆಗಳೂ ರಾಜನಿಷ್ಠರಾಗಿದ್ದು ಸರಕಾರದ ಆಡಳಿತೆಗೆ ನೆರವಾಗಬೇಕೆಂದೂ, ಸಂಸ್ಥಾನದಲ್ಲಿ ಶಾಂತಿ, ಸುವ್ಯವಸ್ಥೆ ನೆಲೆಗೊಳ್ಳುವಂತೆ ನೋಡಿಕೊಳ್ಳಬೇಕೆಂದೂ ಅದೇ ಸಂದೇಶದಲ್ಲಿ ಪ್ರಜೆಗಳಿಗೆ ಅಪ್ಪಣೆ ಕೊಡಿಸಿದ್ದಾರೆ.

ಮೈಸೂರ ಪ್ರಜೆಗಳು ಮೈಸೂರು ತಿರುವಾಂಕೂರಿಗಿಂತ ಒಂದು ಹೆಜ್ಜೆ ಮುಂದೆ ಹೋಗಬಹುದೆಂತು ಭಾವಿಸಿದ್ದರು. ಆದರೆ ಮಹಾರಾಜರ ಘೋಷಣೆಯಲ್ಲಿ ಜೊತೆಗಾರ ಘಟನಾ ಸಮಿತಿಯ ಬಗ್ಗೆ ಸ್ಪಷ್ಟ ಉಲ್ಲೇಖವಿಲ್ಲವೇ ಇಲ್ಲ. ಈ ಘೋಷಣೆಯು ಪ್ರಜೆಗಳ ಆಶೆ ಆಕಾಂಕ್ಷೆಗಳನ್ನು ಪೂರೈಸುವದಿಲ್ಲ ಎಂದು ಮೈಸೂರ ವಿಧಿಮಂಡಳದಲ್ಲಿಯ ವ್ಯಾಪಾರ ವಾಣಿಜ್ಯ ಪ್ರತಿನಿಧಿಗಳಾದ ಶ್ರೀ ವೆಂಕೋಜಿ ರಾಯರು ಹೇಳಿದರು.

ದಬ್ಬಾಳಿಕೆಯಿಂದ ಚಳವಳಿಯನ್ನು ಹತ್ತಿಕ್ಕಬಹುದೆಂದು ಮೈಸೂರ ಸರಕಾರವು ಭಾವಿಸಿದ್ದರೆ ಅದು ಶುದ್ಧ ತಪ್ಪು. ಮೈಸೂರ ಪ್ರಜೆಗಳಿಗೆ ಅವರ ಹೊಣೆಗೊತ್ತಿದೆ. ಕಾಂಗ್ರೆಸಿನಿಂದ ಪ್ರಾರಂಭಿಸಲ್ಪಟ್ಟ ಹೋರಾಟ ತಮ್ಮದೇ ಎಂದು ಅವರು ಮನಗಂಡಿದ್ದಾರೆ. ಮೈಸೂರಿನ ಪ್ರತಿಯೊಬ್ಬ ಪುತ್ರನೂ ಪುತ್ರಿಯೂ ಸಿಡಿದೆದ್ದು ಜೊತೆಗೇಡಿ ಮತ್ತು ನಿರಂಕುಶ ಆಳಿಕೆಯ ವಿರುದ್ಧ ಬಂಡು ಸಾಗಿಸುವರು ಎಂದು ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಸಮಿತಿಯ ಅಧ್ಯಕ್ಷರೂ ಮೈಸೂರು ಸತ್ಯಾಗ್ರಹದ ತೃತೀಯ ಸರ್ವಾಧಿಕಾರಿಗಳೂ ಆದ ಶ್ರೀ ಎಸ್. ನಿಜಲಿಂಗಪ್ಪನವರು ಬಾಗಲಕೋಟೆಯಿಂದ ಹೊರಡಿಸಿದ ತಮ್ಮ ಪ್ರಕಟನೆಯಲ್ಲಿ ಮೈಸೂರು ಸರಕಾರಕ್ಕೆ ಎಚ್ಚರಿಕೆ ಕೊಟ್ಟಿದ್ದಾರೆ.

ಪಂಜಾಬ ಗಲಭೆಯಲ್ಲಿ ಒಂದೂವರೆ ಲಕ್ಷ ಜನರು ಸತ್ತಿದ್ದಾರೆಂದು ಪಾಕಿಸ್ತಾನದಲ್ಲಿ ಹಿಂದುಸ್ತಾನದ ಹಾಯಕಮೀಶನರರಾಗಿರುವ ಶ್ರೀ ಶ್ರೀಪ್ರಕಾಶರು ಬನಾರಸದಲ್ಲಿ ಒಂದು ಭೋಜನದ ಕಾಲಕ್ಕೆ ಹೇಳಿದರು.




### ಮುಂಬಯಿ ಶೇರಪೇಟೆ

ಮುಂಬಯಿ ತಾ ೧೦— ಮೂರು ದಿನಗಳು ಬಿಡುವಿನ ನಂತರ ಮುಂಬಯಿ ಶೇರ ಪೇಟಿ ಇಂದು ಪ್ರಾರಂಭವಾಯಿತು. ದಿಲ್ಲಿ ಕಲಕತ್ತೆಗಳ ಲ್ಲಿಯ ಪರಿಸ್ಥಿತಿಯು ಹಿಡಿತದಲ್ಲಿ ಬಂದ ಸುದ್ದಿ ಬಂದದ್ದರಿಂದ ಪೇಟಿ ಸ್ಥಿರವಾಗಿತ್ತು. ಪ್ರಾರಂಭದಲ್ಲಿ ಅಷ್ಟೊಂದು ವ್ಯಾಪಾರ ನಡೆಯಲಿಲ್ಲ. ಟಾಟಾ ಡಿಪ್ಪಿಣ ಡಿಫರ್ಡ ೧೮೫೨-೮-೦, ಆರ್ಡಿನರಿ ೩೭೪—೮-೦, ಇಂಡಿಯನ್ ಅಯರ್ನ ೩೩—೧೪—೦ ಅಸೋಸಿಯೇಟೆಡ್ ಸಿಮೆಂಟ್ಸ ೧೧೨—೧೨—೦ ಇದ್ದವು. ಜವಳಿ ಬಾಜಾರದಲ್ಲಿ ಫಿನ್ಲೆ ೨೯೩—೦—೦ ಕೋಹಿನೂರ ೫೬೧ —೦-೦ ಡಾಯಿಂಗ ೧೦೩೭-೮-೦, ನಾಗಪುರ ೧೮೬-೪-೦, ಸ್ವದೇಶಿ ೫೭೪—೦—೦, ಗೋಕಾಕ ೩೧೧-೦-೮ ಸೆಂಚ್ಯುರಿ ೯೮೨—೮-೦, ಸೆಂಟ್ರಲ್ ಇಂಡಿಯಾ ೩೦೦—೦—೦, ಸಿಂಪ್ಲೆಕ್ಸ ೨೨೬-೦-೦ ಇದ್ದವು.

### ಬ್ಯಾಂಕುಗಳು

ಸೆಂಟ್ರಲ್ ಬ್ಯಾಂಕ ೯೫—೪—೦ ಇಂಪೀರಿಯಲ್ ಬ್ಯಾಂಕ (ಪೂ. ಸಂಚಿತ) ೨೨೬೦-೦-೦ ಇಂಪೀರಿಯಲ್ ಬ್ಯಾಂಕ ( ಅರ್ಧ ಸಂಚಿತ ) ೫೬೭—೮—೦ ರಿಝರ್ವ ಬ್ಯಾಂಕ ೧೧೭-೮-೦.

ಸೆಕ್ಯುರಿಟಿಗಳು:— ೩% (೧೯೪೬) ಪರಿವರ್ತನೀಯ ಸಾಲ—೧೦೦-೧-೬ ೩॥% (೧೯೪೭-೫೧) ೧೦೦—೮—೦ ೩% (೧೯೫೭) ೧೦೨—೯—೦.

### ಚಿನ್ನ ಬೆಳ್ಳಿ

ತಯಾರಿ ಚಿನ್ನ ೧೧೦—೮—೦, ವಾಯದಾ ೧೧೦—೪—೦, ತಯಾರಿ ಬೆಳ್ಳಿ ೧೬೪—೮—೦, ವಾಯದಾ ೧೬೭—೮—೦.

### ಅರಳೆ

ಜಾನೇವಾರಿ ೪೫೭-೬-೦ ಮಾರ್ಚ ೪೬೪-೧೪-೦ ಯಿಂದ ಈ ದಿನ ಹೆಚ್ಚಿನ ಧಾರಣೆಯೆಂದರೆ ೪೫೭-೧೨-೦ ೪೫೮—೦—೦ ರ ವರೆಗೆ ಮತ್ತು ಕಡಮೆ ಧಾರಣೆಯೆಂದರೆ ೪೫೬—೮—೦ ರಿಂದ ೪೫೬—೧೧—೦ ವರೆಗೆ ಇದ್ದಿತು.

### ಶಿವಮೊಗ್ಗೆ ಅಡಿಕೆ

| | |
|---|---|
| ದೇಶಾವರ ನಂ ೧ ಮಣ ೧ಕ್ಕೆ | ೫೨–೫೫ |
| ,, ,, ೨ | ೪೮–೫೨ |
| ರಾಶಾ ಅಲವು | ೪೮–೫೨ |
| ಕೊರಸಾಲು | ೪೬–೫೦ |
| ಬೆಟ್ಟೆ ವಂತಿ | ೩೩–೩೪ |
| ಬೆಟ್ಟೆ | ೨೩–೩೦ |

ರೇಲ್ವೆ ಸಂಪಿನ ಮೂಲಕ ಇಲ್ಲಿನ ಅಡಿಕೆ ವ್ಯಾಪಾರದ ಮೇಲೆ ಪರಿಣಾಮವಾಗಿದೆ. ಬೇಡಿಕೆಯಿದ್ದರೂ ನಿರ್ಯಾತದ ಅನುಕೂಲತೆಗಳಿಲ್ಲದ್ದರಿಂದ ವ್ಯಾಪಾರಕ್ಕೆ ಅಡ್ಡಿಯುಂಟಾಗಿದೆ.

### ಹುಬ್ಬಳ್ಳಿ

| | | |
|---|---|---|
| ಹೊಸ ಜಯವಂತ ಹತ್ತಿ | ನಂ. ೧ | ೨೫೦–೨೬೫ |
| „ | ನಂ. ೨ | ೨೩೦–೨೩೫ |
| „ | ನಂ. ೩ | ೨೧೫–೨೨೫ |
| ಹಳೇ ಜಯವಂತ ಹತ್ತಿ | | ೨೬೫–೨೯೬ |
| ಜಿನ ಹೊಸದು | | ೧೭೦–೧೮೦ |
| ಜಿನ ಹಳೇದು | | ೧೯೦–೨೦೦ |
| ಡಬಲರೋಲ | | ೧೬೦–೧೬೫ |
| ಸಾಜಿನ | | ೧೫೫–೧೬೦ |

## ನಾಲ್ಕು ಮಾತು

(೧೩ ನೇ ಪುಟದಿಂದ)

ಕಮೀಟೆಯರು ಹೂಡಿದ ಸತ್ಯಾಗ್ರಹವು ಈಗ ಒಳ್ಳೆ ಭರದಿಂದ ಸಾಗಿದ್ದು ಸಮಾಧಾನದ ಸಂಗತಿಯು. ತುಂಗಭದ್ರೆಯ ಈಚೆಗಿನ ಕನ್ನಡ ಬಾಂಧವರು ಪೂರ್ಣ ಸ್ವಾತಂತ್ರ್ಯವನ್ನು ಅನುಭವಿಸುತ್ತಿರುವಾಗ ಮೈಸೂರಲ್ಲಿ ಇನ್ನೂ ನಿರಂಕುಶ ರಾಜ್ಯಪದ್ಧತಿ ನಡೆಯುತ್ತಲಿರುವದು ಬಹಳ ಅನ್ಯಾಯದ ಸಂಗತಿ ಎಂಬುದು ಒಬ್ಬ ಚಿಕ್ಕ ಮಗುವಿಗೂ ತಿಳಿಯುವ ಮಾತು. ಈ ವರೆಗೆ ಈ ಬೇಡಿಕೆಯ ಕಡೆಗೆ ಮೈಸೂರ ಸರಕಾರದವರು ದುರ್ಲಕ್ಷ್ಯ ಮಾಡಿದರೆಂಬುದಕ್ಕೆ ಸಾಕಷ್ಟು ಪ್ರಮಾಣಗಳಿವೆ. ಮೈಸೂರು ಹೈದ್ರಾಬಾದದಂತೆ ಹಿಂದುಳಿದ ಸಂಸ್ಥಾನವಲ್ಲ; ಸರ್ವತೋಪರಿ ಮುಂದುವರಿದ ಸಂಸ್ಥಾನ. ವ್ಯಾಪಾರ, ಉದ್ಯೋಗ ಶಿಕ್ಷಣ ಮುಂತಾದವು ಮೈಸೂರಲ್ಲಿ ಚೆನ್ನಾಗಿ ಬೆಳೆದಿವೆ. ಇಂಡಿಯಾ ಒಕ್ಕೂಟದಲ್ಲಿಯ ಅನೇಕ ಪ್ರಾಂತಗಳಿಗಿಂತ ಮೈಸೂರು ಈ ವಿಷಯದಲ್ಲಿ ಮುಂದಾಗಿದೆ ಎಂದು ಹೇಳಿದರೆ ಅದು ಅತಿಶಯೋಕ್ತಿಯಲ್ಲ. ಅಲ್ಲಿಯ ಆಡಳಿತದ ಮಟ್ಟ ಕೂಡ ಇತರ ಪ್ರಾಂತಗಳಿಗಿಂತ ಕಡಿಮೆ ಇಲ್ಲ. ಹೀಗಿರಲು ಮೈಸೂರ ಸರಕಾರದವರು ಈ ಜವಾಬ್ದಾರಿ ರಾಜ್ಯ ಪದ್ಧತಿಯ ಬೇಡಿಕೆಯನ್ನು ಏಕೆ ಹತ್ತಿಕ್ಕುತಿರುವರು ಇದು ತಿಳಿಯದ ಸಂಗತಿ. ಮೊನ್ನೆ ಮಹಾರಾಜರು ಒಂದು ಹೇಳಿಕೆಯನ್ನು ಹೊರಡಿಸಿದ್ದೇನೋ ನಿಜ. ಆದರೆ ಅದು ಹೇಳಿಕೆಯೆ ಆಗಿ ಉಳಿಯಬಾರದೆಂಬುದಕ್ಕೆ ಅದಕ್ಕನುಸರಿಸಿ ಪ್ರತ್ಯಕ್ಷಕ್ರಮಗಳನ್ನು ಕೈಕೊಳ್ಳಬೇಕಾಗುವದು. ಜವಾಬ್ದಾರಿ ರಾಜ್ಯ ಪದ್ಧತಿಯ ತತ್ವಗಳಿಗನುಸರಿಸಿ ಒಂದು ಘಟನೆಯನ್ನು ಸಿದ್ಧಪಡಿಸಲೋಸುಗ ಲೋಕ ಸಮ್ಮತವಾದ ಒಂದು ಘಟನಾಸಮಿತಿಯನ್ನು ಏರ್ಪಡಿಸುವದು ಅವಶ್ಯವು. ಇದೆಲ್ಲವೂ ಹದಮೀರಿ ಹೋಗುವದರೊಳಗಾಗಿ, ಜನರ ವಿಶ್ವಾಸವು ಹಾರಿಹೋಗುವ ಮೊದಲು ಆಗಲಿಕ್ಕೆ ಬೇಕು. ಅಂದರೆ ಮಾತ್ರ ಅದು ಫಲಕಾರಿಯಾಗಬಲ್ಲದು.

X X X X

ಇನ್ನು ಮೈಸೂರ ಸರಕಾರದವರು ಕೂಡಲೆ ಮೇಲಿನಂತೆ ಉಪಕ್ರಮಗಳನ್ನು ಕೈಕೊಳ್ಳದೆ ಹೋದರೆ ಹೂಡಲಾದ ಸತ್ಯಾಗ್ರಹವು ಹಾಗೆಯೆ ಮುಂದಕ್ಕೆ ಸಾಗುವದು. ಅದಕ್ಕೆ ಇಡೀ ಹಿಂದುಸ್ತಾನದಲ್ಲಿಯೆ ಬೆಂಬಲ ಸಿಕ್ಕುವುದೆಂಬಲ್ಲಿ ಸಂಶಯವಿಲ್ಲ. ಕರ್ನಾಟಕದ ವರಂತೂ ಬೆಂಬಲವನ್ನು ಕೊಟ್ಟೇತೀರುವರು ಸಣ್ಣಪುಟ್ಟ ಸಂಸ್ಥಾನದವರು ಸಹ ಒಕ್ಕೂಟಗಳನ್ನು ಮಾಡಿಕೊಂಡು ಪ್ರಜೆಗಳಿಗೆ ಪೂರ್ಣ ಜವಾಬ್ದಾರಿಯನ್ನು ವಹಿಸಿಕೊಡುತಿರುವ ಸಂದರ್ಭದಲ್ಲಿ ಕರ್ನಾಟಕದಲ್ಲಿ ಅತ್ಯಂತ ಪ್ರಬುದ್ಧ ಸಂಸ್ಥಾನವಾದ ಮೈಸೂರು ಹಿಂದುಳಿಯುವುದೆಂದರೆ ಲಾಂಛನಾಸ್ಪದವು. ಆ ಲಾಂಛನವನ್ನು ತೊಡೆದೊಗೆಯಲು ಹೂಡಲಾದ ಸತ್ಯಾಗ್ರಹವು ಸರ್ವಥಾಯಥಾಯೋಗ್ಯವೆಂಬುದನ್ನು ಹಿಂದುಸ್ತಾನದ ಮುಖಂಡರು ಒಪ್ಪಿರುವರು. ಅದಕ್ಕೆ ಬೆಂಬಲವನ್ನೀಯುವದು ಎಲ್ಲರ ಕರ್ತವ್ಯವು.

## --- ಈ ವಾರದ ಕತೆ ---



# ತೀರಿಕೊಂಡ ಹೆಂಡತಿ

ಶ್ರೀ ಆರ್. ಬಿ. ನರಗುಂದಕರ, ಬಿ. ಎ., ಅನುವಾದಕರು

ನಾನು ಅವಳನ್ನು ಭ್ರಮೆಯಿಂದ ಪ್ರೀತಿಸ್ತಿದೆನು. ಈ ಜಗತ್ತಿನಲ್ಲಿ ಒಂದೇ ವ್ಯಕ್ತಿಯು ಕಾಣುತ್ತಿರುವುದು, ಮನಸ್ಸಿನಲ್ಲಿ ಒಂದೇ ವಿಚಾರವಿರುವದು, ಹೃದಯದಲ್ಲಿ ಒಂದೇ ಆಶೆ ನೆಲಸಿರುವುದು, ತುಟಿಗಳ ಮೇಲೆ ಒಂದೇ ಹೆಸರು ನಲಿಯುವುದು—ಇವೆಲ್ಲ ಬಹಳ ವಿಚಿತ್ರವಾದ ಸಂಗತಿಗಳಾಗಿವೆ. ಹೇಗೆ ಒಂದು ನದಿಯು ತನ್ನ ಉಗಮಸ್ಥಾನದಿಂದ ಹೊರಬೀಳುವುದೋ, ಹಾಗೆಯೇ ನಮ್ಮ ಹೃದಯದ ಕೆಳಬದಿಯಿಂದ ಒಂದು ಹೆಸರು ಯಾವಾಗಲೂ ಹೊರಬೀಳುತ್ತಿರುವುದು. ಆದ್ದರಿಂದ ಆ ಹೆಸರನ್ನೇ ಪ್ರಾರ್ಥನೆಯಂತೆ ಎಲ್ಲಿ ಬೇಕಾದಲ್ಲಿ ದಿನವೆಲ್ಲ ಗುಣುಗುತ್ತೇವೆ.

ನಾನು ನನ್ನ ಕಥೆಯನ್ನು ಈಗಲೇ ಹೇಳಬಯಸುವದಿಲ್ಲ. ಪ್ರೇಮವು ಯಾವಾಗಲೂ ಒಂದೇ ರೀತಿಯ ಒಂದೇ ಕತೆ. ನಾನು ಅವಳನ್ನು ಕಂಡಿದ್ದೆ ಮತ್ತು ಪ್ರೀತಿಸಿದ್ದೆ—ಎಂಬುದು ಎಲ್ಲವನ್ನೂ ಹೇಳುವುದು. ಅವಳ ಪ್ರೇಮದಲ್ಲಿ ಅವಳ ಬಾಹುಗಳಲ್ಲಿ ಅವಳ ಆಲಿಂಗನದಲ್ಲಿ, ಅವಳ ನೋಟದಲ್ಲಿ, ಅವಳ ಅರಿವೆ ತೊಡಿಗೆಗಳಲ್ಲಿ, ಅವಳ ಶಬ್ದಗಳಲ್ಲಿ, ನಾನು ಪೂರ್ಣವಾಗಿ, ಬಿಗಿಯಾಗಿ ಸುತ್ತಲ್ಪಟ್ಟು ಒಂದು ವರ್ಷವನ್ನೆಲ್ಲ ಕಳೆದೆ. ಅಂಥ ಹೊತ್ತಿನಲ್ಲಿ, ದಿವಸವೆಂಬುದು, ರಾತ್ರಿಯೆಂಬುದು, ನಾನು ಜೀವಿಸಿರುವೆನೆಂಬುದು, ಸತ್ತಿರುವೆನೆಂಬುದು—ಈ ಹಳೆಯ ಜಗತ್ತಿನಲ್ಲಿಯೋ—ಬೇರೆ ಜಗತ್ತಿನಲ್ಲಿಯೋ—ಎಂಬುದು ಯಾವುದೂ ನನಗೆ ತಿಳಿದು ಬರಲಿಲ್ಲ.

ಆ ಮೇಲೆ ಅವಳು ತೀರಿಕೊಂಡಳು. ಹೇಗೆ? ಅದು ನನಗೆ ಗೊತ್ತಿಲ್ಲ. ನನಗೆ ಈಗ ಏನೂ ಗೊತ್ತಿಲ್ಲ.

ಒಂದು ಸಂಜೆಯಲ್ಲಿ, ಮಳೆ ಬರುತ್ತಿರುವಾಗ, ಅವಳು ತೋಯ್ಸಿಕೊಂಡು ಮನೆಗೆ ಬಂದಳು; ಮರುದಿವಸ ಅವಳು ಕೆಮ್ಮ ಹತ್ತಿದಳು. ಒಂದು ವಾರದ ವರೆಗೆ ಅವಳು ಕೆಮ್ಮಿದಳು, ಆ ಮೇಲೆ ಹಾಸಿಗೆ ಹಿಡಿದಳು.

ಆ ಮೇಲೇನಾಯಿತು? ಅದು ನನಗೆ ಈಗ ಅರಿವಿಲ್ಲ.

ಡಾಕ್ಟರುಗಳು ಬಂದರು, ಔಷಧದ ಚೀಟು ಬರೆದರು, ಹೊರಟು ಹೋದರು. ಅವರು ಉಪಾಯಗಳನ್ನು, ಔಷಧಗಳನ್ನು ಮಾಡಿದರು. ಒಬ್ಬ ದಾದಿಯು ಅವುಗಳನ್ನು ಅವಳಿಗೆ ಕುಡಿಯಲು ಕೊಡುತ್ತಿದ್ದಳು. ಅವಳ ಕೈಗಳು ಬೆಚ್ಚಗಾಗಿ, ಹಣೆಯು ಬೆವರಿನಿಂದ ತೋಯ್ದು ಸುಡುತ್ತಿದ್ದು, ಅವಳ ಕಣ್ಣುಗಳು ಕಾಂತಿಯುಕ್ತವಾಗಿದ್ದರೂ ಖಿನ್ನವಾಗಿದ್ದವು. ನಾನು ಅವಳ ಕೂಡ ಮಾತಾಡಿದೆನು. ಅವಳು ಉತ್ತರಕೊಟ್ಟಳು. ನಾವೇನು ಮಾತಾಡಿದೆವು? ನನಗೆ ಈಗ ಅರಿವಿಲ್ಲ. ನಾನು ಎಲ್ಲವನ್ನು ಮರೆತಂತಿದೆ. ಅವಳು ಸತ್ತಳು, ಅವಳ ಕೊನೆಯ ಉಸಿರು—ಅಶಕ್ತವಾದ ನಿಟ್ಟುಸಿರನ್ನು ಈಗಲೂ ನೆನೆಸುವೆನು. ಆ ದಾದಿ ಹೇಳಿದಳು. ಹಾ! ನಾನು ತಿಳಿದುಕೊಂಡೆ. ಆ ಹೊತ್ತಿನಿಂದ ನನಗೆ ಏನೂ ತಿಳಿಯಲಿಲ್ಲ, ಏನೂ ಇಲ್ಲ. ನಾನು ಒಬ್ಬ ಪಾದ್ರಿಯನ್ನು ಕಂಡೆ. ಅವನು ಹೇಳಿದ—"ನಿನ್ನ ಹೆಂಡತಿ......" ಅವನು ಅವಳನ್ನು ನಿಂದಿಸುತ್ತಿರುವನೆಂದು ನನಗೆ ಅನಿಸಿತು. ಅವಳು ಸತ್ತಿರುವುದರಿಂದ, ಯಾರಿಗೂ ಅವಳ ವಿಷಯವಾಗಿ ಮಾತನಾಡಲು ಅಧಿಕಾರವಿರಲಿಲ್ಲ. ನಾನು ಅವನನ್ನು ಹೊರಗಟ್ಟಿದೆ. ಮತ್ತೊಬ್ಬನು ಬಂದ. ಉದಾರ ಮತ್ತು ಕೋಮಲ ಹೃದಯದ ಮನುಷ್ಯನಾದ ಅವನು ಅವಳ ವಿಷಯ ನನಗೆ ಹೇಳುವಾಗ ನಾನು ರೋದಿಸಿದೆ.

ಅವಳನ್ನು ಮಸಣದಲ್ಲಿ ಹೂಳುವುದಕ್ಕಾಗಿ ಸಾವಿರಾರು ಸೂಚನೆಗಳನ್ನು ನನ್ನಿಂದ ತಿಳಿದುಕೊಂಡರು. ಅದೇನಿತ್ತೆಂಬುದು ಈಗ ನನಗೆ ಅರಿವಿಲ್ಲ. ನನಗೆ ಆ ಶವದ ಪೆಟ್ಟಿಗೆಯು—ಅದರಲ್ಲಿ ಅವಳನ್ನಿಟ್ಟು, ಮಳೆ ಬಡಿಯುತ್ತಿರುವಾಗ ಅದ ಸಪ್ಪಳವು ನನಗೆ ನೆನಪಿಗೆ ಬರುತ್ತದೆ; ಅಯ್ಯೋ, ದೇವರೆ!

ಅವಳನ್ನು ಮಸಣದಲ್ಲಿ ಹೂಳಿದರು. ಹೂಳಿದರು, ಅವಳನ್ನು! ಆ ತಗ್ಗಿನಲ್ಲಿ, ಕೆಲವು ಜನರು ಬಂದಿದ್ದರು.—ಗೆಳೆಯರು. ನಾನು ನಿಲ್ಲಲಾರದಾದೆ! ಓಡಿದೆ. ಹಾದಿಯಲ್ಲಿ ಎಷ್ಟೋ ತಾಸುಗಳ ವರೆಗೆ ನಡೆದೆ. ಆ ಮೇಲೆ ಮನೆಗೆ ಹೋದೆ, ಮರುದಿವಸ ಪ್ರವಾಸ ಮಾಡಲು ಹೊರಟೆ.

x x x

ಪ್ಯಾರಿಸ್ಸಿಗೆ ನಾನು ನಿನ್ನೆ ಬಂದೆನು.

ನಾನು ನನ್ನ ಮಲಗುವ ಕೋಣೆಯನ್ನು ಮತ್ತೊಮ್ಮೆ ನೋಡಿದೆ ಆ ಕೋಣೆ, ಆ ಸಾಮಾನುಗಳು, ಆ ಎಲ್ಲ ಶಾಶ್ವತವಾದ ಗಿಡಗಳಿಂದ ಸುತ್ತಿದ ಮನೆಯು, ಮತ್ತೊಮ್ಮೆ ನೋಡಲು ಆ ಮರೆತು ಹೋದ ಅತಿಶಯವಾದ ದುಃಖವು ನನ್ನನ್ನು ಪುನಃ ಆವರಿಸಿತು. ಕೂಡಲೆ ನಾನು ಕಿಟಕಿಯ ಬಾಗಿಲನ್ನು ತೆರೆದೆ ಹೊರಗೆ ಹಾರಿಕೊಂಡೆ. ಯಾವ ಗೋಡೆಗಳ ನಡುವೆ ಅವಳು ಮಲಗಿಕೊಳ್ಳುತ್ತಿದ್ದಳು, ಮತ್ತು ಯಾವ ಗೋಡೆಗಳು ತಮ್ಮ ಕಣ್ಣಿಗೆ ಕಾಣದ ತೂತುಗಳಲ್ಲಿ ಅವಳ ಶರೀರದ, ಮಾಂಸದ, ಮತ್ತು ಉಸುರಿನ ಅಣುಗಳನ್ನು ಹಿಡಿದಿರಬಹುದು, ಎಂಬ ಭಾವನೆಯಿಂದ, ಈ ಎಲ್ಲ ಸಂಗತಿಗಳಿಂದ ಮನಗಾಣದಂತಾದೆ. ಅಲ್ಲಿ ನಿಲ್ಲಲಾರದೆ, ನನ್ನ ಟೊಪ್ಪಿಗೆಯನ್ನು ತೆಗೆದುಕೊಂಡು, ಕೂಡಲೆ ಹೊಂಗೆ ಹೊರಡಲು ಅನುವಾದೆ. ಒಮ್ಮೆಲೆ ತಲೆಬಾಗಿಲವರೆಗೆ ಹೋಗುತ್ತಿರುವಾಗ—ಅವಳು ಪ್ರತಿದಿನ ಹೊರಗೆ ಹೋಗುವಾಗ, ತನ್ನ ಪೋಷಾಕು ತಲೆಯಿಂದ ಕಾಲಿನ ವರೆಗೂ ಚೆನ್ನಾಗಿರುವುದೆಂಬುದನ್ನು ನೋಡಲಿಕ್ಕೆ ಉಪಯೋಗಿಸುತ್ತಿದ್ದ, ಒಂದು ದೊಡ್ಡ ಕನ್ನಡಿಯ ಮುಂದೆ ನಾನು ಹಾಯ್ದು ಹೋದೆ. ಆ ಕನ್ನಡಿಯ ಮುಂದೆ ನಾನು ನಿಶ್ಚೇಷ್ಟನಾಗಿ ನಿಂತೆ, ಯಾಕಂದರೆ ಅದು ಅವಳ ಪ್ರತಿಬಿಂಬವನ್ನು ಈಗಲಾದರೂ ಹಿಡಿದಿಟ್ಟಿರಬಹುದು. ನನ್ನ ಪ್ರಣಯ ನೋಟಗಳು ಅವಳನ್ನು ಹಿಡಿದಿರುವಂತೆ, ಆ ಕನ್ನಡಿಯೂ, ಅವಳನ್ನು ಒಂದು ಕಾಲಕ್ಕೆ ಹಿಡಿದಿದ್ದಿತು. ಆದರೆ, ಈಗ ಅದರ ನುಣುಪಾದ ಕೆಳಬದಿಯು ಬರಿದಾಗಿ ಕಂಡಿತು. ನಾನು ಆ ಕನ್ನಡಿಯನ್ನು ನೋಡುತ್ತ ನಡುಗುತ್ತ ನಿಂತಿದ್ದೆ ಆ ಕನ್ನಡಿಯನ್ನು ನಾನು ಪ್ರೀತಿಸುವಂತೆ ಭಾಸವಾಯಿತು. ಅದನ್ನು ತಟ್ಟಿ ನೋಡಿದೆ, ಅದು ತಣ್ಣಗಾಗಿತ್ತು, ಓ ನೆನಪೇ! ನೆನಪೇ! ತಣ್ಣಗಿರುವ, ಜೀವಿಸುವ, ಅಂಜಿಸುವ ಈ ಕನ್ನಡಿಯು ನಮ್ಮ ಎಲ್ಲ ದುಃಖದ ಕಾರಣವು. ಕನ್ನಡಿಯ ಮೇಲೆ ಪ್ರತಿಬಿಂಬಗಳು ಮೂಡುವುವು ಮತ್ತು ಕರಗುವುವು, ಅದು ಮೂಡಿದ್ದನ್ನೆಲ್ಲ ಮರೆಯುವುದು. ತನ್ನ ಮುಂದೆ ನಡೆದದ್ದನ್ನೆಲ್ಲ ಮರೆಯುವುದು. ಅಂಥ ಕನ್ನಡಿಯಂತಿರುವ ಮನುಷ್ಯನು ನಿಜವಾದ ಸುಖಪುರುಷನು. ಆದರೆ ನಾನೆಷ್ಟು ಕೊಂಡರೆ ಪಡುತ್ತಿದ್ದೇನೆ!

ನಾನು ಹೊರಗಡೆ ಹೊರಟೆ. ನನ್ನ ಇಚ್ಛೆಯಿರದೆ, ನಾನೇನು ಮಾಡುವೆನೆಂಬುದನ್ನು ಅರಿಯದೆ, ನಾನು ಮಸಣದ ಕಡೆಗೆ ನಡೆದೆ. ಅಲ್ಲಿ ಹೋಗಿ, ಅವಳ ಗೋರಿಯನ್ನು ಮತ್ತು ಸಂಗಮವರಿ 'ಕ್ರಾಸಿ'ನ ಮೇಲೆ ಬರೆದ ಕೆಲವು ಶಬ್ದಗಳನ್ನು ಓದಿದೆ—"ಅವಳು ಪ್ರೇಮಿಸಿದಳು, ಪ್ರೇಮಿಸಲ್ಪಟ್ಟಳು ಮತ್ತು ತೀರಿಕೊಂಡಳು." ಅಲ್ಲಿ ನಾನು ಬಹಳ ಹೊತ್ತು ಇದ್ದೆ ಆ ಮೇಲೆ ರಾತ್ರಿಯಾಗುತ್ತಿದ್ದುದನ್ನು ಕಂಡೆ, ಆಗ ಒಂದು ವಿಚಿತ್ರ ಮತ್ತು ಅಸಹ್ಯವಾದ ಇಚ್ಛೆಯು. ಖಿನ್ನಪಡುತ್ತಿರುವ ಪ್ರಿಯಕರನ ಇಚ್ಛೆಯಂತೆ ನನ್ನನ್ನು ಆವರಿಸಿತು; ಆ ರಾತ್ರಿಯೆಲ್ಲವನ್ನು, ಆ ಕೊನೆಯ ರಾತ್ರಿಯನ್ನು ಅವಳ ಹತ್ತರ, ಅವಳ ಗೋರಿಯ ಹತ್ತರ, ಅಳುತ್ತ ಕಳೆಯಬೇಕೆಂದು ಮನಮಾಡಿದೆ. ಆದರೆ ಯಾರಾದರೂ ನನ್ನನ್ನು ನೋಡಬಹುದೇ? ನಾನು ಎದ್ದೆ. ಮತ್ತು ಆ ಕಳೆದ ಪಟ್ಟಣದಲ್ಲಿ ತಿರುಗಾಡಹತ್ತಿದೆ. ನಡೆದೇ ನಡೆದೆ; ಜೀವಂತ ಪಟ್ಟಣಕ್ಕಿಂತ ಈ ಪಟ್ಟಣವು ಎಷ್ಟು ಸಣ್ಣದಾಗಿದೆ! ಆದರೂ ಸತ್ತವರು ಇದ್ದವರಿಗಿಂತಲೂ ಹೆಚ್ಚಾದ್ದಾರೆ ಒಂದೇ ಹೊತ್ತಿನಲ್ಲಿ, ದಿನದ ಬೆಳಕನ್ನು ಅನುಭವಿಸಲು, ತೊರೆಗಳ ನೀರು ಕುಡಿಯಲು, ದ್ರಾಕ್ಷೆಯ ರುಚಿಸವಿಯಲು, ಹೊಲದಲ್ಲಿಯ ಬೆಳೆಯಿಂದ ಬಕ್ಕರಿ ಮಾಡಿ ತಿನ್ನಲು ಮನೆಗಳು, ಹಾದಿಗಳು—ಇವೆಲ್ಲ ನಮಗೆ ನಾಲ್ಕು ಶತಮಾನದ ವರೆಗೂ ಬೇಕು.

ಆದರೆ ಸತ್ತ ಜನರಿಗೆ, ಮನಷ್ಯ ಜೀವನದ ನಿಸ್ತೇಜ ಭಾಗದ ಪಾಂಥರಿಗೆ ಯಾವುದೂ ಏನೂ ಬೇಕಾಗಿಲ್ಲ. ಜಗತ್ತು ಅವುಗಳನ್ನು ಅನುಭವಿಸುವುದು, ಮರೆವು ಅದೆಲ್ಲವನ್ನೂ ಅಳಿಸಿಬಿಡುವುದು.

ವಸತಿಯಿರದ ಮಸಣದ ಕೊನೆಗೆ, ನಾನು ನಿರ್ಜನವಾದ ಮಸಣದ ಕಡೆಗೆ ಬಂದೆ. ಅಲ್ಲಿ ಎಷ್ಟೋ ದಿವಸಗಳ ಹಿಂದೆ ಸತ್ತವರು ತಮ್ಮ ಜೀವ ಧೂಳಿಯನ್ನು ಭೂಮಿಯ ಕೂಡ ಕೂಡಿಸಲು—ತಮ್ಮ ಜೀವನದ ಕೊನೆಗೆ ಬಂದಿದ್ದರು.

ಅದು ಅಡವಿ ಹೂಗಳಿಂದ, ಗಟ್ಟಿಯಾದ ಕರಿಯ ಸುರಾಯಿಗಿಡಗಳಿಂದ, ಒಂದು ಮಬ್ಬಾದ, ದೊಡ್ಡ ವನದೋಟದಿಂದ ಮನುಷ್ಯನ ಮಾಂಸದ ಮೇಲೆ ಬೆಳೆದಿದ್ದಿತು. ನಾನು ಏಕಾಕಿಯಾಗಿದ್ದೆ. ಒಂದು ಹಸುರು ಗಿಡದ ಹಿಂದೆ ಅಡಗಿ ಕೊಂಡಿದ್ದೆ. ಅದರಗಟ್ಟಿಯಾದ, ಮಬ್ಬಾದ ಟೊಂಗೆಗಳಲ್ಲಿ ನಾನು ಅಡಗಿಕೊಂಡೆ.

ಪೂರ್ಣ ಕಾರ್ಗತ್ತಲೆಯಾದ ಕೂಡಲೆ ನನ್ನ ಆಶ್ರಯಸ್ಥಳವನ್ನು ಬಿಟ್ಟಿದ್ದೆ. ಮತ್ತು ಆ ಸತ್ತವರಿಂದ ತುಂಬಿದ್ದ ಸ್ಥಳದ ಮೇಲೆ ಮೃದುವಾದ ನಿಧಾನವಾದ ಹೆಜ್ಜೆಗಳಿಂದ ನಡೆಯಹತ್ತಿದೆ.

ನಾನು ಎಷ್ಟೋ ಹೊತ್ತು ನಡೆದೆ. ಅವಳು ನನಗೆ ಸಿಗಲಿಲ್ಲ.

ಎರಡೂ ಕೈಗಳನ್ನು ಮುಂದೆ ಚಾಚಿ ತೆರೆದ ಕಣ್ಣುಗಳಿಂದ, ಕೈಕಾಲು, ಮೊಣಕಾಲು, ಎದೆಗಳಿಂದ ಗೋರಿಗಲ್ಲುಗಳನ್ನು ಎಣಿಸುತ್ತ, ನಾನು ನಡೆದೆ. ಆದರೆ ಅವಳು ನನಗೆ ಸಿಗಲಿಲ್ಲ! ಒಬ್ಬ ಕುರುಡು ಮನುಷ್ಯನು ತನ್ನ ಹಾದಿಯನ್ನು ಹುಡುಕುವಂತೆ, ಕಲ್ಲುಗಳನ್ನು, ಅವುಗಳ ಮೇಲಿನ ಅದ್ದ ಬರಹಗಳನ್ನು, ಕಬ್ಬಿಣ ಸಲಾಕೆಗಳನ್ನು, ಕಾಜಿನ ತುಣುಕುಗಳನ್ನು, ಬಾಡಿಬಿದ್ದ ಹೂವುಗಳನ್ನು, ನಾನು ಮುಟ್ಟಿ ಅರಿತುಕೊಂಡೆ. ಬೊಟ್ಟುಗಳಿಂದ ಅಕ್ಷರಗಳ ಮೇಲೆ ಕೈಯಾಡಿಸುತ್ತ, ಹೆಸರುಗಳನ್ನು ಓದಿದೆ. ಅದೆಂತಹ ರಾತ್ರಿ! ಅದೆಂತಹ ರಾತ್ರಿ! ಅವಳು ನನಗೆ ದೊರಕಲಿಲ್ಲ! ಚಂದ್ರನು ಕೂಡ ಉದಯಿಸಿದ್ದಿಲ್ಲ! ಇಕ್ಕಟ್ಟಾದ ಸ್ಥಳಗಳಲ್ಲಿ ಎರಡೆರಡು ಗೋರಿಗಳ ನಡುವೆ ನಡೆಯುವಾಗ ಅಸಾಧ್ಯವಾದ ಅಂಜಿಕೆಯು ನನ್ನನ್ನು ಆವರಿಸಿತು. ಗೋರಿಗಳು! ಗೋರಿಗಳು! ಎಲ್ಲಿ ನೋಡಿದಲ್ಲಿ ಗೋರಿಗಳು! ಎಡಗಡೆಗೆ, ಬಲಗಡೆಗೆ, ನನ್ನ ಮುಂದುಗಡೆಗೆ, ಎಲ್ಲ ಕಡೆಗೂ ಗೋರಿಗಳು! ನಾನು ಅವುಗಳಲ್ಲಿಯ ಒಂದು ಗೋರಿಯ ಮೇಲೆ ಕುಳಿತುಕೊಂಡೆ. ಯಾಕಂದರೆ ನನಗೆ ಮುಂದೆ ನಡೆಯಲು ಬರದಂತಾಗಿ, ನನ್ನ ಕಾಲುಗಳು ನಡುಗ ಹತ್ತಿದುವು. ನನ್ನ ಎದೆಯು ಬಡಿದುಕೊಳ್ಳುವುದನ್ನು ಕೇಳಿದೆ! ಮತ್ತೇನನ್ನೋ ಕೇಳಿದೆ! ಅದೇನು? ಅರಿಯದ ಹೆಸರಿಲ್ಲದ ಸಪ್ಪಳ! ಭೀತಿಗೊಂಡ ನನ್ನ ಮನಸ್ಸಿನಲ್ಲಿ, ಅಭೇದ್ಯವಾದ ಕತ್ತಲೆಯ ಮಂತ್ರಜಾಲ ಹರಡಿದ ಭೂಮಿಯಲ್ಲಿ, ಮನುಷ್ಯರ ಹೆಣಗಳು ಹೂಳಲ್ಪಟ್ಟ ಭೂಮಿಯ ಕೆಳಗಡೆಯಲ್ಲಿ, ಆ ಸಪ್ಪಳವು ಎಲ್ಲಿಂದ ಬಂದಿರಬಹುದು? ನನ್ನ ಸುತ್ತಲೂ ನೋಡಿದೆ.

ಎಷ್ಟು ಹೊತ್ತು ನಾನಲ್ಲಿದ್ದೆ? ನನಗೆ ಅರಿವಿಲ್ಲ. ಹೆದರಿಕೆಯಿಂದ, ಅರಚುವುದರಿಂದ, ಪ್ರಾಣಗುಂದಿದಂತಾಗಿ ಮರಣ ಸಮೀಪವಾದಂತೆ ಗಾಬರಿಯಾದೆ.

ಆ ಮೇಲೆ, ನಾನು ಕುಳಿತು ಕೊಂಡಿದ್ದ ಸಂಗಮವರಿ ಹಾಸುಗಲ್ಲು ಒಮ್ಮೆಲೆ ಅಲುಗಾಡುತ್ತಿರುವಂತೆ ನನಗೆ ಭಾಸವಾಯಿತು. ನಿಜವಾಗಿಯೂ ಅದು ಅಲ್ಲಾಡುತ್ತಿತ್ತು. ಯಾರೋ ಅದನ್ನು ಮೇಲೆ ನೂಕುತ್ತಿರಬಹುದು ಎನಿಸಿತು.

ಒಮ್ಮೆಲೆ ಒಂದೇ ಹಾರಿಕೆಗೆ, ಸಮೀಪದ ಗೋರಿಗೆ ಬಂದೆನು. ಆ ಮೇಲೆ, ನಾನು ಬಿಟ್ಟಿದ್ದ ಕಲ್ಲು ಪೂರ್ಣವಾಗಿ ಹೊರಗೆ, ಬಂದದ್ದನ್ನು ನೋಡಿದೆ. ಮತ್ತು ಸತ್ತವನೊಬ್ಬನು ಹೊರಗೆ ಬಂದನು ತನ್ನ ಬಾಗಿದ ಬೆನ್ನಿನಿಂದ ಆ ಕಲ್ಲನ್ನು ಮೇಲೆ ನೂಕುತ್ತಿದ್ದ ಬರಿಬತ್ತಲೆಯ ಅಸ್ಥಿಪಂಜರವು, ಆಗ ಕಗ್ಗತ್ತಲೆಯಾಗಿದ್ದರೂ, ಪೂರ್ಣವಾಗಿ ನನಗೆ ಕಂಡುಬಂದಿತು. ಆ ಗೋರಿಯ ಮೇಲಿನ 'ಕ್ರಾಸ್' ದ ಮೇಲೆ ನಾನು ಹೀಗೆ ಓದಿದೆ "೫೦ ವರ್ಷದವನಾಗಿ, ಈ ಜೀವನವನ್ನು ತ್ಯಜಿಸಿದ 'ಜಾಕಸ್ ಒಲಿವ್ಹಂಟ್' ಎಂಬವನು ಇಲ್ಲಿರುವನು. ಅವನು ಉದಾರ ಮತ್ತು ಪ್ರಾಮಾಣಿಕ ಮನುಷ್ಯನಾಗಿದ್ದನು. ತನ್ನ ಕುಟುಂಬವನ್ನು ಪ್ರೀತಿಸಿ ಕಾಪಾಡಿದನು. ದೇವರ ದಯೆಯಿಂದ ಸುಖದಿಂದ ತೀರಿಕೊಂಡನು."

ಈಗ ಆ ಸತ್ತಮನುಷ್ಯನು, ತನ್ನ ಗೋರಿಯ ಮೇಲೆ ಬರೆದ ಶಬ್ದಗಳನ್ನು ತಾನೇ ಓದಹತ್ತಿದನು. ಹಾದಿಯಲ್ಲಿಯ ಒಂದು ಸಣ್ಣ ಚೂಪಾದ ಕಲ್ಲನ್ನು ಕೈಯಲ್ಲಿ ತೆಗೆದುಕೊಂಡು ಆ ಶಬ್ದಗಳನ್ನು ತೊರೆದಾದ ಮೇಲೆ, ಆ ಸ್ಥಳಗಳನ್ನು ತೆರೆದ ಕ್ರೂರ ಕಣ್ಣುಗಳಿಂದ ದೃಷ್ಟಿಸುತ್ತ, ಆ ಶಬ್ದಗಳನ್ನು ಮೆಲ್ಲನೆ ಒರಸಿಬಿಟ್ಟನು. ಒಂದು ಎಲುಬಿನ ತುದಿಯಿಂದ ಅವನು ಹೊಳೆಯುವ ಅಕ್ಷರಗಳನ್ನು ಪುನಃ ಬರೆದನು. ಆ ಎಲುಬು ಅವನ ಕೈಬೆರಳಾಗಿರಬಹುದು. ಆ ಬರೆದ ಸಾಲುಗಳು ಬೆಂಕಿ ಕಡ್ಡಿಯ ತುದಿಯಿಂದ ಗೋಡೆಯ ಮೇಲೆ ಬರೆದಂತಿದ್ದುವು. "ತನ್ನ ೫೦ ನೆಯ ವರ್ಷದಲ್ಲಿ, ಈ ಜೀವನವನ್ನು ತ್ಯಜಿಸಿದ 'ಜಾಕಸ್ ಒಲಿವಂಟ್' ನು ಇಲ್ಲಿರುವನು. ಕ್ರೂರತನದಿಂದ ಅವನು ತನ್ನ ತಂದೆಯ ಮರಣಕ್ಕೆ ಕಾರಣನಾದನು. ಹೆಂಡತಿಯನ್ನು ಕ್ರೂರತನದಿಂದ ನಡೆಸಿಕೊಂಡನು. ಮಕ್ಕಳಿಗೆ ತ್ರಾಸ ಕೊಟ್ಟನು, ನೆರೆಯವರನ್ನು ಮೋಸ ಮಾಡಿದನು. ಶಕ್ಯವಿದ್ದಾಗ, ಕಳವು ಕೂಡ ಮಾಡಿದನು. ಆದ್ದರಿಂದ, ಅವನು ಕೆಟ್ಟ ಮನುಷ್ಯನಂತೆ ಸತ್ತನು."

ಅವನು ಬರೆಯುವದನ್ನು ಮುಗಿಸಿದನು ಮತ್ತು ಅಚಲನಾಗಿ ತಾನು ಬರೆದದ್ದನ್ನು ವಿಚಾರ ಮಾಡಹತ್ತಿದ. ಸುತ್ತಲೂ ತಿರುಗಿ ನೋಡಿದ. ಎಲ್ಲ ಗೋರಿಗಳೂ ತೆರೆದಿದ್ದುವು. ಎಲ್ಲ ಸತ್ತ ದೇಹಗಳೂ ಹೊರಗೆ ಬಂದಿದ್ದುವು. ಆ ಗೋರಿಗಲ್ಲಿನ ಮೇಲೆ ಅವರ ಆಪ್ತ ಜನರು ಬರೆದ ಸುಳ್ಳು ಸಂಗತಿಗಳನ್ನು ಅವರೆಲ್ಲರೂ ಅಳಿಸಿ ತೆಗೆದರು. ಮತ್ತು ನಿಜವಾದ ಸಂಗತಿಯನ್ನು ಅದರ ಮೇಲೆ ತಿರುಗಿ ಬರೆದರು.

ಅವರೆಲ್ಲರೂ ತಮ್ಮ ಬಂಧು ಬಳಗದವರ ಕೊಲೆಗಡಕರು, ಮತ್ಸರವುಳ್ಳವರು, ಕಪಟಿಗಳು ಸುಳ್ಳುಗಾರರು, ಮೋಸಗಾರರು, ಚಾಡಿಗಾರರು ಕಳವುಮಾಡಿದವರು, ನಾಚಿಕೆಗೇಡು ಕೆಲಸಗಳನ್ನು ಮಾಡಿದವರಾಗಿದ್ದರೆ. ಈ ಉದಾರ ತಂದೆಯರು, ಈ ನಂಬಿಗೆಯುಳ್ಳ ಗಂಡ ಹೆಂಡತಿಯರು, ಈ ಭಕ್ತಿಯುಳ್ಳ ಮಕ್ಕಳು, ಈ ಪತಿವ್ರತಾ ಸ್ತ್ರೀಯರು, ಈ ಪ್ರಮಾಣಿಕ ವ್ಯಾಪಾರಸ್ಥರು. ಬೈಗಳಿಗೆ ಹೆಸರಾದ ಈ ಗಂಡಸು, ಹೆಂಗಸರು...... ಇವರೆಲ್ಲರನ್ನೂ ನಾನು ನೋಡಿದೆ. ತಮ್ಮ ಶಾಶ್ವತವಾದ ಮನೆಯ ಹೊಸ್ತಿಲಿನ ಮೇಲೆ, ಕ್ರೂರ, ಭೀತಿಯುಳ್ಳ, ಪವಿತ್ರವಾದ ಸತ್ಯವನ್ನು ಅವರೆಲ್ಲರೂ ಆ ಒಂದೇ ವೇಳೆಯಲ್ಲಿ ಬರೆಯ ಹತ್ತಿದರು ಇಂಥ ಸತ್ಯವನ್ನು ಈ ಜಗತ್ತಿನಲ್ಲಿ ಪ್ರತಿಯೊಬ್ಬನೂ ಮರೆತಿರುತ್ತಾನೆ."

ಅವಳೂ ತನ್ನ ಗೋರಿಯ ಮೇಲೆ ಬರೆಯುತ್ತಿರಬಹುದು—ನನಗೆನಿಸಿತು. ಅವಳನ್ನು ಸ್ವಲ್ಪ ಹೊತ್ತಿನಲ್ಲಿ ಹುಡುಕಬಹುದೆಂಬ ಆಶೆಯಿಂದ, ನಿರ್ಭೀತಿಯಿಂದ, ಗೋರಿಗಳ, ಅಸ್ಥಿಪಂಜರಗಳ ಮಧ್ಯದಲ್ಲಿ ಓಡುತ್ತ ಅವಳನ್ನು ಹುಡುಕುತ್ತ ಸಾಗಿದೆ.

ನಾನು ಅವಳನ್ನು ದೂರದಿಂದಲೇ ಗುರುತಿಸಿದೆ. ಅರಿವೆಗಳಿಂದ ಮುಚ್ಚಿದ್ದ ಅವಳ ಮುಖವು ನನಗೆ ಕಾಣಲಿಲ್ಲ.

ಮತ್ತು ಆ ಸಂಗಮವರಿ ಕಲ್ಲಿನ ಮೇಲೆ ನಾನು ಮೊದಲು ಹೀಗೆ ಓದಿದ್ದೆ. "ಅವಳು ಪ್ರೇಮಿಸಿದಳು, ಪ್ರೇಮಿಸಲ್ಪಟ್ಟಳು, ಮತ್ತು ತೀರಿಕೊಂಡಳು." ಆದರೆ ಈಗ ಹೀಗೆ ಕೊರೆದಿದ್ದೆ,

"ಒಂದು ದಿವಸ ತನ್ನ ಪ್ರಿಯಕರನನ್ನು ತಪ್ಪಿಸಿ ಅವಳು ಮಳೆಯಲ್ಲಿ ಹೊರಗೆ ಹೋದಾಗ ಚಳಿಯಾಯಿತು ಅದುದರಿಂದ ಸತ್ತಳು."

ಒಂದು ಗೋರಿಯ ಹತ್ತಿರ ನಿಶ್ಚೇಷ್ಟನಾಗಿ ಬಿದ್ದ ನನ್ನನ್ನು, ಮುಂಜಾವದಲ್ಲಿ ಎತ್ತಿಕೊಂಡು ತಂದಿರಬಹುದೆಂದು ಎನಿಸುತ್ತದೆ.

(ಒಂದು ಇಂಗ್ಲೀಷ ಕತೆಯ ಅನುವಾದ)

Reg. No. B. 3148

LICENCE No. 3
Licenced to Post without Prepayment

KARMAVEER 15-9-47




ಜ್ಯೋತಿಷಿ:- ಕೃಷ್ಣಶಾಸ್ತ್ರಿ ಛತ್ರೆ, ಭವಿಷ್ಯಕಥನ ಆಫೀಸ ಖಡೇಬಜಾರ ಬೆಳಗಾವಿ

# ಸಪ್ಟಂಬರ ೧೫ ರಿಂದ ೨೧ ರ ವರೆಗೆ

## ಮೇಷ

ಪ್ರಕೃತಿ ಉತ್ತಮ ಆದರೆ ಹೆಂಡತಿ ಮತ್ತು ಕುಟುಂಬಿಕರಲ್ಲಿಯು ಬಹುತರ ಎಲ್ಲ ಜನರೊಡನೆ ಮೇಲಿಂದ ಮೇಲೆ ಬಹಳ ವಿರೋಧ. ಅಲ್ಲದೆ ಪ್ರತಿಯೊಬ್ಬರ ಪ್ರಕೃತಿಗೆ ತಿರುಕಳ ಕಿರಿಕಿರಿ, ರೋಖು ಸಂಗ್ರಹದಲ್ಲಿ ಕೊರತೆ ಬೀಳುವಂತೆ ವೆಚ್ಚ. ಸ್ಥಾವರದಲ್ಲಿ ಕೆಲವು ಬಿಕ್ಕಟ್ಟಿನ ವಿಚಾರದ ಪ್ರಸಂಗ ಆದರೆ ಮಕ್ಕಳಲ್ಲಿ ಬಹುತರ ಜನರ ಉನ್ನತಿ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಉತ್ತಮ ಆದರೆ ಲಾಭದ ಅಂಕಿ ಹಿಮ್ಮಟ್ಟ ಹತ್ತುವದು. ಪುರುಷರಿಗಿಂತ ಸ್ತ್ರೀಯರಿಂದ ಹೆಚ್ಚು ದ್ವೇಷ ಮತ್ತು ಶತ್ರುತ್ವ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಟ್ಟುವದು. ಪತ್ರವ್ಯವಹಾರಕ್ಕಿಂತ ಭೆಟ್ಟಿ ಮತ್ತು ಪ್ರವಾಸವೂ ಅನುಕೂಲ. ಆದರೆ ಅಶ್ವಿನಿಯ ೩ನೇ ಮತ್ತು ೪ನೇ ಚರಣಗಳಿಗೆ ತೊಂದರೆ ಕಡಿಮೆ. ತಾ. ೧೭, ೧೮, ೧೯ ಅನುಕೂಲ.

ಅದರಂತೆಯೆ ೨೧ನೇ ತಾರೀಕು ಮುಂಜಾನೆ ೪ ಹೊಡೆದು ೨ ಮಿನಿಟುಗಳಿಗೆ ಅಂದರೆ ಭಾದ್ರಪದ ಶುದ್ಧ ೬ ಶನಿವಾರ ಸೂರ್ಯೋದಯಾನಂತರ ಘಟಿಕಾ ೫೪ ಪಳಾ ೨೦ಕ್ಕೆ ಗುರು ತುಲಾ ರಾಶಿಯಿಂದ ವೃಶ್ಚಿಕಕ್ಕೆ ಬರುವನು ಅರ್ಥಾತ್ ಈ ರಾಶಿಗೆ ಅವನು ೮ನೆಯವನಾಗುವನು ಆದುದರಿಂದ ಅವನು ಕೌಟುಂಬಿಕ ಉತ್ಕರ್ಷ, ಸ್ಥಾವರದ ಹೆಚ್ಚಳ ಪಾರಮಾರ್ಥಿಕ ಮಾತುಗಳಿಗೆ ಅನುಕೂಲ ಆದರೆ ಸ್ವಂತದ ಉತ್ಕರ್ಷದಲ್ಲಿ ಮಾತ್ರ ವಿಘ್ನಗಳು, ಪ್ರಕೃತಿಯಲ್ಲಿ ಕುರುಕುರಿ ಕುತರ್ಕ ಹೆಚ್ಚು ಫಲಗಳುಂಟಾಗುವವು.

## ವೃಷಭ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಅನುಕೂಲ. ಸ್ಥಾವರದಲ್ಲಿ ಹೆಚ್ಚಳ ಆದರೆ ಎಲ್ಲದರಲ್ಲಿಯೂ ಹೆಂಡತಿಯ ಛಾಜೀಲ ವರ್ಚಸ್ಸು. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಅನುಕೂಲ ಉಳಿದು ಲಾಭ ಹೆಚ್ಚಿನ ಪ್ರಮಾಣದಲ್ಲಿ. ಭಾವೀ ಹಿತಕ್ಕೆ ಪೋಷಕವಾಗುವ ಕೆಲ ಮಾತುಗಳು. ಆಶಾಜನ್ಯ ಸ್ಥಿತಿಗಾಗಿ ಮನಸ್ಸು ಯಾವಾಗಲೂ ಹುರುಪಿನಲ್ಲಿ ಪ್ರಿಯಜನರ ಸಹವಾಸ. ಮೊದಲು ವಿರೋಧವಿದ್ದ ಮಿತ್ರತ್ವದಲ್ಲಿ ಮತ್ತೆ ಸುಧಾರಣೆ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನಸ್ಥಿತಿ. ಪ್ರವಾಸಾದಿ ಕೆಲಸ ಉತ್ತಮ. ರೋಹಿಣಿಯ ಕೊನೆಯ ೩ ಮತ್ತು ಮೃಗಾದ ೧ ನೇ ಚರಣಕ್ಕೆ ಹೆಚ್ಚು ಅನುಕೂಲ. ತಾ. ೧೫, ೧೬, ೨೦, ೨೧ ಅನುಕೂಲ.

೨೧ ನೇ ತಾರೀಕಿಗೆ ಬರುವ ೭ನೇ ಗುರು, ಪ್ರಕೃತಿ, ಲಾಭ ವಾದ ವಿವಾದದಲ್ಲಿ ಯಶಸ್ಸು, ಭ್ರಾತೃಪ್ರೇಮ ಮತ್ತು ಸ್ತ್ರೀಸುಖ ಇವುಗಳಿಗೆ ಉತ್ತಮವಿರುವನು ಆದರೂ ಗೃಹಕಲಹ ಮತ್ತು ಆಪ್ತವಿರೋಧ ಅಲ್ಪಸ್ವಲ್ಪ ಉಂಟಾಗುವದು.

## ಮಿಥುನ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಅನುಕೂಲ. ಪ್ರಸಿದ್ಧಿಗೆ ಬರುವಂತೆ ಸಾಹಸದ ಕೆಲ ಕೃತ್ಯಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಕಷ್ಟ ಸಾಧ್ಯ ಆದರೆ ಲಾಭ ಮನಸ್ಸಿನಂತೆ, ಸ್ಥಾವರದಲ್ಲಿ ಸ್ವಲ್ಪ ಹೆಚ್ಚಳ. ಉತ್ತಮ, ವಾಹನ ಸುಖ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನಸ್ಥಿತಿ. ಮಿತ್ರಸುಖ ಉತ್ತಮ ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಹೆಚ್ಚು ಅನುಕೂಲ. ಆಂದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ೧ ನೇ ಚರಣಕ್ಕೆ ತೊಂದರೆ ಕಡಿಮೆ. ತಾ. ೧೭, ೧೮, ೧೯ ಅನುಕೂಲ.

೨೧ ಕ್ಕೆ ಬರುವ ೬ ನೇ ಗುರು, ಹೆಂಡತಿಗೆ ಸ್ವಲ್ಪ ಕಾಯಿಲೆ ಉಭಯತರಲ್ಲಿ ಮೇಲಿಂದ ಮೇಲೆ ವಿರೋಧ. ಶತ್ರುಗಳ ಹೆಚ್ಚಳ ಆದರೆ ಅಧಿಕಾರದಲ್ಲಿ ಹೆಚ್ಚಳ. ಶುಭ ಸಂಗತಿಗಳಲ್ಲಿ ಹೆಚ್ಚು ವೆಚ್ಚ ಮೊದಲಾದ ಫಲಗಳನ್ನು ಕೊಡುವನು.

## ಕರ್ಕ

ಪ್ರಕೃತಿ ಸಾಧಾರಣವೆ ಆದರೆ ಪ್ರಾಪಂಚಿಕ ಸುಖ ಉತ್ತಮ. ಮಕ್ಕಳಲ್ಲಿ ಒಬ್ಬರು ಮನಸ್ಸಿಗೆ ಧಕ್ಕೆ ಎನಿಸುವಂತಹ ಅಪವರ್ತನ ಮಾಡುವರು. ಉದ್ಯೋಗದಲ್ಲಿ ಲಾಭ ತುಂಬ ಆದರೆ ಪ್ರಗತಿ ಮತ್ತು ಪ್ರತಿಷ್ಠೆಯು ಸಾಮಾನ್ಯ. ಮಿತ್ರ ಮತ್ತು ಭ್ರಾತೃಸುಖ ಉತ್ತಮ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನಸ್ಥಿತಿ. ಪ್ರವಾಸ ಮತ್ತು ಪತ್ರವ್ಯವಹಾರವೂ ಭೆಟ್ಟಿಗಿಂತ ಸ್ವಲ್ಪ ಅನುಕೂಲ. ಪುಷ್ಯ ಕೊನೆಯ ೩ ಮತ್ತು ಆಶ್ಲೇಷಾದ ೧ ನೇ ಚರಣಕ್ಕೆ ತೊಂದರೆ ಕಡಮೆ. ತಾ. ೧೫, ೧೬, ೨೧ ಅನುಕೂಲ.

೨೧ ಕ್ಕೆ ಬರುವ ೫ ನೇ ಗುರು, ಮಕ್ಕಳಿಗೆ ಉತ್ಕರ್ಷ ಮಿತ್ರಸುಖ ಲಾಭ ಮತ್ತು ಭಾಗ್ಯವೃದ್ಧಿ ಆರೋಗ್ಯ ಮತ್ತು ಸ್ತ್ರೀ ಸುಖ ಇವುಗಳಿಗೆ ಉತ್ತಮನಿರುವನು.

## ಸಿಂಹ

ನಿಮ್ಮ ಪ್ರಕೃತಿ ಉತ್ತಮ ಹೆಂಡತಿಗೆ ಸ್ವಲ್ಪ ಕ್ಲೇಶ ಅಲ್ಲದೆ ಅವಳ ನಿಮ್ಮ ಬಗ್ಗೆ ಬಹಳ ಅಪಾದನ ತೋರಿಸುವಳು. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಮನಸ್ಸಿನಂತೆ, ಭಾವೀ ಹಿತಕ್ಕೆ ಪೋಷಕವಾಗುವ ಕೆಲ ಮಾತುಗಳು, ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಉತ್ತಮ ಲಾಭ ಆದರೆ ವೆಚ್ಚವೂ ಅಂದಾಜಿಗಿಂತ ಹೆಚ್ಚು ಗುಪ್ತಶತ್ರುಗಳಿಂದ ಬಹಳ ತೊಂದರೆ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಮಘಾದ ೨ನೇ ಮತ್ತು ೪ನೇ ಹಾಗು ಪೂರ್ವಾದ ಎರಡನೇ ಮತ್ತು ನಾಲ್ಕನೇ ಚರಣಗಳಿಗೆ ತೊಂದರೆ ಕಡಮೆ. ತಾ. ೧೫, ೧೬, ೧೭, ೧೮ ಅನುಕೂಲ.

೨೧ನೇ ತಾರೀಕಿಗೆ ಬರುವ ೪ನೇ ಗುರು ಮಕ್ಕಳಲ್ಲಿ ಅಪಕರ್ಷ. ಆಪ್ತ ವಿರೋಧ. ಹೆಚ್ಚು ವೆಚ್ಚವಾದರೂ ಅದರಲ್ಲಿಯು ಹೇತು ಅಸಾಧ್ಯ. ವಾದದಲ್ಲಿ ಹಿಮ್ಮೆಡುವದು. ಔದ್ಯೋಗಿಕ ಲಾಭ ಕಡಮೆ ಆದರೆ ಅವಚಿತ ಲಾಭ ಪಾರಮಾರ್ಥಿಕ ಮಾತಿನಲ್ಲಿ ಯಶಸ್ಸು ಮೊದಲಾದ ಫಲವನ್ನು ಕೊಡುವನು.

## ಕನ್ಯಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖವೂ ಬಹಳ ಉತ್ತಮ. ವೆಚ್ಚ ಹೆಚ್ಚು ಆದರೂ ಉದ್ದೇಶ ಸಾಧ್ಯವಾಗುವದು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಬಹಳ ಉತ್ತಮ. ಮಿತ್ರ ಸುಖ ಉತ್ತಮ. ನೋಕರ ವರ್ಗದವರಿಗೆ ಹೆಚ್ಚು ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ವೈಯಕ್ತಿಕ ಮಹತ್ವವು ಪ್ರಸ್ಥಾಪಿತವಾಗುವಂಥ ಕೆಲ ಸಂಗತಿಗಳು. ಪ್ರವಾಸಾದಿ ಕೆಲಸ ಹಿತಕರ. ಹಸ್ತಾದ ಕೊನೆಯ ೩ ಮತ್ತು ಚಿತ್ರಾದ ೧ನೇ ಚರಣಕ್ಕೆ ಹೆಚ್ಚು ಅನುಕೂಲ. ತಾ. ೧೫, ೧೬, ೧೭, ೧೮ ಅನುಕೂಲ.

ತಾ. ೨೧ಕ್ಕೆ ಬರುವ ೩ನೇ ಗುರು ಸ್ತ್ರೀ ಮತ್ತು ಮಿತ್ರ ಸುಖ ಭಾಗ್ಯ ಕೀರ್ತಿ ವಾದವಿವಾದ ಇವುಗಳಿಗೆ ಉತ್ತಮ ಆದರೆ ತಾಯಿಗೆ ಮತ್ತು ಸ್ಥಾವರಕ್ಕೆ ಬಹಳ ತೊಂದರೆ ಕೊಡುವವನಿರುವನು.

## ತುಲಾ

ಪ್ರಕೃತಿ ಸಾಧಾರಣವೆ. ಪ್ರಾಪಂಚಿಕ ಸುಖ ಮಧ್ಯಮವೇ. ಪ್ರತಿಯೊಂದರಲ್ಲಿ ಹೆಂಡತಿಯ ವರ್ಚಸ್ಸು ಉದ್ಯೋಗದಲ್ಲಿ ಲಾಭ ಅನುಕೂಲ ಆದರೆ ಪ್ರಗತಿ ಮತ್ತು ಪ್ರತಿಷ್ಠೆ ಕುಂದುತ್ತ ಹೋಗುವದು. ಅನವಶ್ಯಕ ವೆಚ್ಚ ಬಹಳ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವೆಚ್ಚ ಮತ್ತು ತೊಂದರೆ ಬಹಳ ಆದರೆ ಯಶಸ್ಸು ಉತ್ತಮ. ಪ್ರವಾಸಾದಿ ಕೆಲಸ ತೊಂದರೆಯಿಂದಲೆ ಆದರೆ ಕೊನೆಯಲ್ಲಿ ಅನುಕೂಲ. ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ಮೊದಲನೆ ಚರಣಕ್ಕೆ ತೊಂದರೆ ಕಡಮೆ. ತಾ. ೧೮, ೧೯, ೨೧ ಅನುಕೂಲ.

೨೧ಕ್ಕೆ ಬರುವ ೨ನೇ ಗುರು ಕೌಟುಂಬಿಕ ಉತ್ಕರ್ಷ ಅಧಿಕಾರದ ಹೆಚ್ಚಳ. ಪ್ರತಿಷ್ಠೆ ಮತ್ತು ವರ್ಚಸ್ಸು ಇವುಗಳಿಗೆ ಅನುಕೂಲ ಆದರೆ ಬಂಧುವರ್ಗದವರಲ್ಲಿ ಕ್ಲೇಶ. ಸ್ತ್ರೀ ಸುಖದಲ್ಲಿ ಮೇಲಿಂದ ಮೇಲೆ ಖಂಡ. ಶತ್ರುಗಳ ಹೆಚ್ಚಳ ಮುಂತಾದ ಫಲಗಳನ್ನು ಕೊಡುವನು.

## ವೃಶ್ಚಿಕ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಧಾರಣವೆ ಆದರೆ ಸ್ತ್ರೀಸುಖ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಆಶ್ಚರ್ಯವೆನಿಸುವಂತೆ ಉತ್ತಮ ಆದರೆ ವೆಚ್ಚವೂ ಬಹಳ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನಸ್ಥಿತಿ. ಮಿತ್ರಸುಖ ಉತ್ತಮ ಪ್ರಿಯ ಜನರ ಸಹವಾಸ; ಪ್ರವಾಸಾದಿ ಕೆಲಸ ಹಿತಕರ ಅನುರಾಧೆಯ. ಕೊನೆಯ ೩ ಮತ್ತು ಜೇಷ್ಠಾದ ೧ ನೇ ಚರಣಕ್ಕೆ ಅನುಕೂಲ. ತಾ. ೧೫, ೧೬, ೨೦, ೨೧ ಅನುಕೂಲ.

೨೧ ಕ್ಕೆ ಬರುವ ೧ ನೇ ಗುರು ಸ್ವಲ್ಪ ಗೃಹಕಲಹ ಉಂಟುಮಾಡುವವನಾದರೂ ಸ್ವತಃ ನಿಮ್ಮ ಮತ್ತು ಉಳಿದ ಎಲ್ಲ ಜನರ ಆರೋಗ್ಯ ಸ್ತ್ರೀಸುಖ ಮಕ್ಕಳಿಗೆ ಉತ್ಕರ್ಷ ಬೌದ್ಧಿಕ ಕೆಲಸದಲ್ಲಿ ವಿಜಯ ಮತ್ತು ಭಾಗ್ಯ ವೃದ್ಧಿ ಇವುಗಳಿಗೆ ಉತ್ತಮನಿರುವನು.

## ಧನು

ಪ್ರಕೃತಿ ಅನುಕೂಲ ಹೆಂಡತಿ ಮತ್ತು ಪ್ರಾಪಂಚಿಕಸುಖ ಲೋಕದೃಷ್ಟಿಯಿಂದ ಅನುಕೂಲ ಆದರೆ ಪ್ರಾಸ್ತಾವಿಕ ದಗದಗಿ ಮತ್ತು ಕಲಹಯುಕ್ತ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ ಆದರೆ ಸ್ತ್ರೀ ವಿಷಯಕ ಕೆಲ ಲೋಕಾಪವಾದ ಬರುವ ಅಂಜಿಕೆ. ವಾದದಲ್ಲಿ ಸ್ಪರ್ಧೆಯಲ್ಲಿ ಒಳ್ಳೆಯ ಯಶಸ್ಸು. ಮಿತ್ರತ್ವದಲ್ಲಿ ಸ್ವಲ್ಪ ವಿರಸ. ಪ್ರವಾಸಾದಿ ಕೆಲಸ ಹಿತಕರ, ಮೂಲಾದ ೨ ಮತ್ತು ೪ ನೇ ಹಾಗು ಪೂರ್ವಾಷಾಢಾದ ೨ ಮತ್ತು ೪ ನೇ ಚರಣಗಳಿಗೆ ತೊಂದರೆ ಕಡಮೆ. ತಾ. ೧೫, ೧೬, ೧೭ ೧೮ ಅನುಕೂಲ.

೨೧ ಕ್ಕೆ ಬರುವ ೧೨ ನೇ ಗುರು ಪ್ರಕೃತಿ ಕೆಡುವದು ವೆಚ್ಚ ಹೆಚ್ಚು ಸ್ತ್ರೀ ವಿರೋಧ ಶತ್ರುಗಳಲ್ಲಿ ಹೆಚ್ಚಳ ಆದರೂ ಸ್ಥಾವರದಲ್ಲಿ ಅಭಿವೃದ್ಧಿ ಅವಚಿತ ಲಾಭ ಮತ್ತು ಪಾರಮಾರ್ಥಿಕ ಸಂಗತಿಗಳಿಗೆ ಅನುಕೂಲನಿರುವನು.

## ಮಕರ

ನಿಮ್ಮ ಪ್ರಕೃತಿ ಸಾಧಾರಣವೆ, ಆದರೆ ಉಳಿದವರಿಗೆ ಉತ್ತಮ. ಪ್ರಾಪಂಚಿಕ ಸುಖ ಮನಸ್ಸಿನಂತೆ. ಹೆಂಡತಿ ಮತ್ತು ಮಕ್ಕಳಿಂದ ಅನುಕರಣೀಯ ಸಲಹೆ ಸೂಚನೆಗಳಾದರೂ ಮಿತ್ರರು ಮತ್ತು ಆಪ್ತರಿಂದ ನಿಮ್ಮ ಉದ್ದೇಶವನ್ನು ಹೊಡೆದು ಹಾಕುವ ಬಗ್ಗೆ ಗುಪ್ತರೀತಿಯಿಂದ ಬಹಳ ಪ್ರಯತ್ನ ನಡೆಯುವದು ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಉತ್ತಮ ಆದರೆ ಲಾಭದ ಮಾರ್ಗ ಮಾತ್ರ ವಿಸ್ಖಲಿತವೆ ಆದರೆ ಸ್ವಲ್ಪ ಅವಚಿತ ಲಾಭದ ಸಂಭವ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಪ್ರವಾಸಾದಿ ಕೆಲಸ ಬಹಳ ಹಿತದ್ದು. ಶ್ರವಣಾದ ಕೊನೆಯ ೩ ಮತ್ತು ಧನಿಷ್ಠಾದ ೧ ನೇ ಚರಣಕ್ಕೆ ತೊಂದರೆ ಕಡಮೆಯೆ. ತಾ. ೧೫, ೧೬, ೧೭, ೧೮ ಅನುಕೂಲ.

೨೧ ಕ್ಕೆ ಬರುವ ೧೧ ನೇ ಗುರು ತಾಯಿಗೆ ಸ್ವಲ್ಪ ಕ್ಲೇಶ ಆದರೆ ಹೆಂಡತಿ ಮತ್ತು ಭ್ರಾತೃಸುಖ ದ್ರವ್ಯ ಲಾಭ ಮಕ್ಕಳಿಗೆ ಉತ್ಕರ್ಷ ಮತ್ತು ಸ್ಪರ್ಧೆಯಲ್ಲಿ ಯಶಸ್ಸು ಇವುಗಳಿಗೆ ಬಹಳ ಉತ್ತಮನಿರುವನು.

## ಕುಂಭ

ಪ್ರಕೃತಿ ಸಾಧಾರಣವೆ, ಹೆಂಡತಿ ಮತ್ತು ಮಕ್ಕಳಲ್ಲಿ ಮೇಲಿಂದ ಮೇಲೆ ಮತಭೇದ. ಉದ್ಯೋಗದಲ್ಲಿ ಲಾಭ ಅನುಕೂಲ ಆದರೆ ಪ್ರಗತಿ ಮತ್ತು ಪ್ರತಿಷ್ಠೆ ಕಡಮೆಯೆ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಮಿತ್ರ ಸುಖ ಉತ್ತಮ. ಸಲ್ಪಾದರೂ ಅವಚಿತ ಲಾಭ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಾಭಾದ್ರಪದದ ೧ನೇ ಚರಣಕ್ಕೆ ತೊಂದರೆ ಕಡಮೆ. ತಾ. ೧೮, ೧೯, ೨೧ ಅನುಕೂಲ

೨೧ಕ್ಕೆ ಬರುವ ೧೦ನೇ ಗುರು ಲಾಭಕ್ಕೆ ಸಾಮಾನ್ಯವೆ ಆದರೆ ಅಧಿಕಾರ ಲೌಕಿಕ ಮತ್ತು ಗೃಹಸುಖಕ್ಕೆ ಅನುಕೂಲ ಇರುವನು.

## ಮೀನ

ಪ್ರಕೃತಿಯಲ್ಲಿ ಹೆಚ್ಚಿನ ಸುಧಾರಣೆ, ಪ್ರಾಪಂಚಿಕ ಸುಖ ಸಾಧಾರಣವೆ ಆದರೆ ಸ್ತ್ರೀಸುಖ ಉತ್ತಮ. ಆಪ್ತರಲ್ಲಿ ಕೆಲ ಜನರಿಂದ ಕುಚೇಷ್ಟೆ. ಆದರೆ ಕೆಲವರಿಂದ ಅತಿ ಗೌರವ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಮಾನ್ಯ ಆದರೆ ಲಾಭ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಮತ್ತು ಶತ್ರುಗಳ ಹಾಗು ಸಂಕಟಗಳಲ್ಲಿ ಕೆಲವು ಯದೃಚ್ಛೆಯಿಂದಲೇ ನಾಶ. ಪ್ರವಾಸ ಸ್ವಲ್ಪ ತೊಂದರೆಯದು. ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಉತ್ತಮ. ಉತ್ತರಾ ಭಾದ್ರಪದದ ಕೊನೆಯ ೩ ಮತ್ತು ರೇವತಿಯ ೧ನೇ ಚರಣಕ್ಕೆ ಹೆಚ್ಚು ಅನುಕೂಲ. ತಾ. ೧೫, ೧೬, ೨೦ ಅನುಕೂಲ.

೨೧ ಕ್ಕೆ ಬರುವ ೯ ನೇ ಗುರು ಪ್ರಕೃತಿಗೆ ಉತ್ತಮ ಆರೋಗ್ಯ ಭಾಗ್ಯ ಮತ್ತು ಭಾಗ್ಯವೃದ್ಧಿ ಉದ್ಯೋಗದಲ್ಲಿ ಕೀರ್ತಿ ಪ್ರಭುತ್ವ ಮತ್ತು ಭಾವೀ ಕಾಲದ ಸುಖಸಮಾಧಾನಗಳಿಗೆ ಪೋಷಕ ಸಂಗತಿಗಳು ಮತ್ತು ಮಕ್ಕಳು ಹಾಗು ಬಂಧುವರ್ಗದವರಲ್ಲಿ ಉತ್ಕರ್ಷ ಮೊದಲಾದ ಫಲಗಳನ್ನು ಕೊಡುವನು.

# ಗೋಮಾಂತಕಕ್ಕೆ ನಿಗ್ರೋ ಸೈನಿಕರ ಆಗಮನ

ಇಲ್ಲಿಯ ಪೋರ್ತುಗೀಜ ಅರಸರಿಗೆ ಚಳವಳಿಯ ಭಯವಿರುವದರಿಂದ ಅವರು ತಮ್ಮ ದೇಶದಿಂದ ೪೦೦ ಪೋರ್ತುಗೀಜ ಸೈನಿಕರನ್ನು ಪೋರ್ತುಗೀಜ ಪೂರ್ವ ಆಫ್ರಿಕೆಯಿಂದ ೮೦೦ ನಿಗ್ರೋ ಸೈನಿಕರನ್ನು ಕರೆಸಿರುತ್ತಾರೆ. ಗೋಮಾಂತಕದ ನಗರಗಳಲ್ಲಿ ಈ ಸೈನಿಕರ ಹಾವಳಿ ಹೆಚ್ಚಾಗ ಹತ್ತಿದೆ.



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತಕರ್ನಾಟಕ ಮುದ್ರಣಾಲಯದಲ್ಲಿ "ಲೋಕಶಿಕ್ಷಣ ಟ್ರಸ್ಟಿನ" ಪರವಾಗಿ ಹ. ರಾ. ಪೋಹರೆಯವರಿಂದ ಮುದ್ರಿತವಾಗಿ ಪ್ರಕಟವಾಯಿತು